# ಪಿಂಜಾರ ಸಮುದಾಯದ ಪಾರಂಪರಿಕ ಕಸುಬು: ಆಧುನಿಕ ಮುಖಾಮುಖಿ

(ಸಮಾಜಕಾರ್ಯದಲ್ಲಿ ರಾಯಚೂರು ಜಿಲ್ಲೆಯನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಾದರಪಡಿಸುತ್ತಿರುವ ನಿಬಂಧ)


ಸಂಶೋಧಕರು

ಮಹಿಬೂಬ ಅಲಿ

ಮಾರ್ಗದರ್ಶಕರು

ಡಾ. ಕೇಶವನ್ ಪ್ರಸಾದ್ ಕೆ

ಪ್ರಾಧ್ಯಾಪಕರು





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬



೨೦೧೩

# ಪಿಂಜಾರ ಸಮುದಾಯದ ಪಾರಂಪರಿಕ ಕಸುಬು: ಆಧುನಿಕ ಮುಖಾಮುಖಿ

(ಸಮಾಜಕಾರ್ಯದಲ್ಲಿ ರಾಯಚೂರು ಜಿಲ್ಲೆಯನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಾದರಪಡಿಸುತ್ತಿರುವ ನಿಬಂಧ)

ಸಂಶೋಧಕರು
**ಮಹಿಬೂಬ ಅಲಿ**

ಮಾರ್ಗದರ್ಶಕರು
**ಡಾ. ಕೇಶವನ್ ಪ್ರಸಾದ್ ಕೆ**
ಪ್ರಾಧ್ಯಾಪಕರು



**ಬುಡಕಟ್ಟು ಅಧ್ಯಯನ ವಿಭಾಗ**
**ಸಮಾಜ ವಿಜ್ಞಾನಗಳ ನಿಕಾಯ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ - ೫೮೩ ೨೭೬**

೨೦೧೩

# ಪ್ರಮಾಣ ಪತ್ರ

**"ಪಿಂಜಾರ ಸಮುದಾಯದ ಪಾರಂಪರಿಕ ಕಸುಬು: ಆಧುನಿಕ ಮುಖಾಮುಖಿ"** (ಸಮಾಜಕಾರ್ಯದಲ್ಲಿ ರಾಯಚೂರು ಜಿಲ್ಲೆಯನ್ನು ಅನುಲಕ್ಷಿಸಿ) ಈ ನಿಬಂಧವನ್ನು ಡಾ. ಕೇಶವನ್ ಪ್ರಸಾದ್ .ಕೆ ಪ್ರಾಧ್ಯಾಪಕರು ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣಿಕರಿಸುತ್ತೇನೆ.

ದಿನಾಂಕ:
ಸ್ಥಳ: ವಿದ್ಯಾರಣ್ಯ

(ಮಹಿಬೂಬ ಅಲಿ)
ಸಂಶೋಧಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ದೃಢೀಕರಣ ಪತ್ರ

**"ಪಿಂಜಾರ ಸಮುದಾಯದ ಪಾರಂಪರಿಕ ಕಸುಬು: ಆಧುನಿಕ ಮುಖಾಮುಖಿ"** (ಸಮಾಜಕಾರ್ಯದಲ್ಲಿ ರಾಯಚೂರು ಜಿಲ್ಲೆಯನ್ನು ಅನುಲಕ್ಷಿಸಿ) ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಬುಡಕಟ್ಟು ಅಧ್ಯಯನ ವಿಭಾಗದ ಎಂ.ಫಿಲ್ ಪದವಿಗಾಗಿ ಮಹಿಬೂಬ ಅಲಿ, ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವು ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:
ಸ್ಥಳ: ವಿದ್ಯಾರಣ್ಯ

**(ಡಾ. ಕೇಶವನ್ ಪ್ರಸಾದ್ .ಕೆ)**
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಪರಿವಿಡಿ

# ಅಧ್ಯಾಯ ಒಂದು

## ಪ್ರಸ್ತಾವನೆ

ಹೈದರಬಾದ್ ಕರ್ನಾಟಕದಲ್ಲಿ ಪಿಂಜಾರ ಸಮುದಾಯವು ಸಾಂಸ್ಕೃತಿಕ ಬದುಕಿನ ಎಳೆಯನ್ನು ಗುರುತಿಸುವುದು. ಒಂದು ನಿರ್ದಿಷ್ಟ ಪ್ರದೇಶ ಅಥವಾ ಪ್ರಾಂತ್ಯವಾದ ರಾಯಚೂರು ಜಿಲ್ಲೆಯನ್ನು ಅಧ್ಯಯನಕ್ಕೊಳಪಡಿಸುವುದು ಒಂದು ವಿಶೇಷವಾದ ಮಾದರಿ. ಆದರೆ ಒಂದು ಹಿಂದುಳಿದ ಸಮುದಾಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಕೈಗೊಂಡ ಅವಲೋಕನವಿದು. ಒಂದು ಸಮುದಾಯ ಈ ಜಿಲ್ಲೆಯಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕವಾಗಿ ಪಾಲ್ಗೊಳ್ಳುವಿಕೆ ಮುಖ್ಯವಾಗುತ್ತದೆ. ಹೀಗೆ ಪಾಲ್ಗೊಳ್ಳುವಿಕೆಯ ಒತ್ತಡದಲ್ಲಿ ಒಂದು ಸಮುದಾಯ ತನ್ನತನವನ್ನು ಉಳಿಸಿಕೊಳ್ಳುವ ಪ್ರಯತ್ನವು ಉಂಟಾಯಿತು.

ಹೈದರಬಾದ್ ಕರ್ನಾಟಕದಲ್ಲಿ ಕಾಣಬರುವ ಜಿಲ್ಲೆಗಳಲ್ಲಿ ರಾಯಚೂರು ಜಿಲ್ಲೆಯು ಒಂದು. ಇದು ಸಹ ಬಹುಮನಿ–ಆದಿಲ್‌ಶಾಹಿಗಳ ಆಳ್ವಿಕೆಗೆ ಒಳಪಟ್ಟಿತ್ತು. ಜೊತೆಗೆ ಉತ್ತರ ಭಾರತದ ಇಸ್ಲಾಮ್ ಧರ್ಮದ ಪ್ರಭಾವ ಮತ್ತು ಪ್ರಭುತ್ವ ಇಲ್ಲಿ ಪ್ರಸರಿಸಿತು. ಇದರಿಂದಲೇ ಸ್ಥಳೀಯ ಸಂಸ್ಕೃತಿಗೆ ಇಸ್ಲಾಮಿನ ಬಹುತೇಕ ಸಾಂಸ್ಕೃತಿಕ ಚಹರೆಗಳು ಪ್ರಭಾವಿಸುತ್ತ ರಾಯಚೂರು ಭಾಗದ ಬದುಕು ಸಂಕುಚಿತವಾಯಿತು. ಇಲ್ಲಿಯ ಮುಸ್ಲಿಂ ಸಮುದಾಯದವರು "ಗ್ರಾಮಾಂತರ ಪ್ರದೇಶಗಳ ವೃತ್ತಿಗಾರರು, ಕೃಷಿಕರು ಮುಂತಾದ ಉತ್ಪನ್ನದಾರರು ತಮ್ಮ ಉತ್ಪಾದನೆಗಳನ್ನು ನಗರಗಳಿಗೆ ಒಯ್ದು ವ್ಯಾಪಾರ, ವ್ಯವಹಾರ ನಡೆಸತೊಡಗಿದರು. ಯಾವ ವಸ್ತುಗಳಿಗೆ ಬೇಡಿಕೆ ತೀವ್ರವಾಗಿರುತ್ತದೆಯೋ ಅಂತಹ ಬೇಡಿಕೆಗಳನ್ನು ಪೂರೈಸಲು ತೊಡಗಿದರು. ಇದರಿಂದ ಜನರು ತಮ್ಮ ಪರಂಪರಾಗತ ಕುಲಕಸುಬುಗಳಿಂದ ಅನಿವಾರ್ಯವಾಗಿ ಬೇರೆ ಕಸುಬುಗಳಿಗೆ ತೊಡಗಿಸಿಕೊಂಡರು. ನಗರ ವ್ಯಾಪರಕ್ಕೆ ಹೊಂದುವಂತ ಕಸುಬುಗಳನ್ನು ಕುರಿತು ಉತ್ಪಾದಿಸತೊಡಗಿದರು. ಈ ಬದಲಾವಣೆ ಸಾಂಸ್ಕೃತಿಕವಾಗಿ ಮಹತ್ವದ್ದಾಗಿ ಪರಿಣಮಿಸಿತು. ಈ ಪರಿವರ್ತನೆಗೆ ಶಾಹಿರಾಜ್ಯಗಳು ಕಾರಣವಾದವು. ಈ ಹೊತ್ತಿನಲ್ಲಿಯೂ ಮುಸ್ಲಿಮರಿಗೆ ಇಂಥದ್ದೇ ಒಂದು ವೃತ್ತಿ ಕಸುಬು ಎಂದಿರುವುದಿಲ್ಲ. ಅನುಕೂಲಕ್ಕೆ ತಕ್ಕಂತೆ ಎಲ್ಲ ಬಗೆಯ ವ್ಯಾಪಾರಗಳಲ್ಲಿ ನಿರತರಾಗಿರುತ್ತಾರೆ."[೧] ಎಂದು ಅಮರೇಶ ನುಗಡೋಣಿಯವರು

ವಿಶ್ಲೇಷಿಸುತ್ತಾರೆ. ಈ ಮಾತುಗಳಿಂದ ಮೂರು ನೆಲೆಗಳನ್ನು ಗುರುತಿಸಲು ಸಾಧ್ಯವಿದೆ. ೧) ಗ್ರಾಮೀಣ ಪ್ರದೇಶದ ಸ್ಥಿತಿಗತಿ ೨) ಅಗತ್ಯಕ್ಕೆ ತಕ್ಕಂತೆ ಕಸುಬುಗಳಲ್ಲಿ ಆಧುನಿಕತೆ ಮತ್ತು ೩) ನಿರ್ದಿಷ್ಟವಾದ ಕಸುಬಿನ ಮುಂದುವರಿಕೆಯ ನಿರ್ಲಕ್ಷ್ಯ. ಹೀಗೆ ಬಹುಮುಖಿ ನೆಲೆಗಳಲ್ಲಿ ಮುಸ್ಲಿಮರು ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದಾರೆ. ಮುಸ್ಲಿಂ ಸಂಸ್ಕೃತಿಯ ಉಪಸಂಸ್ಕೃತಿಯಾಗಿ ಬಿತ್ತರಗೊಂಡಿರುವ ಪಿಂಜಾರರು ಸಹ ತಮ್ಮ ಪಾರಂಪರಿಕ ಕಸುಬು ವಿವಿಧ ರೀತಿಗಳಲ್ಲಿ ಅನುಸರಿಸುತ್ತಾ ಆಧುನಿಕತೆಗೆ ಮೈಯೊಡ್ಡಿಕೊಂಡಿದ್ದಾರೆ. ಇದರ ವಿಶ್ಲೇಷಣೆಯನ್ನು ಅಧ್ಯಯನದ ಮುಂದಿನ ಅಧ್ಯಾಯಗಳಲ್ಲಿ ಮಾಡಲಾಗಿದೆ.

ಪಿಂಜಾರರ ಮೂಲ ಕಸುಬು ಹತ್ತಿ ಸ್ವಚ್ಛಗೊಳಿಸುವುದು, ಹಾಸಿಗೆ-ದಿಂಬುಗಳನ್ನು ತಯಾರಿಸುವುದು, ಕೈಮಗ್ಗಕ್ಕೆ ಅಂಟಿಕೊಂಡು ಬದುಕನ್ನು ನಡೆಸುವುದು. ಹತ್ತಿಗೆ ಸಂಬಂಧಪಟ್ಟ ಕೆಲಸದಲ್ಲಿ ತಮ್ಮನ್ನು ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡವರು. ಹೀಗೆ ಹತ್ತಿಯು ವಿಪುಲವಾಗಿ ಸಿಗುವ ಬಯಲು ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಅಂದರೆ ಕರ್ನಾಟಕದ ಬಯಲುಸೀಮೆಯ ಜಿಲ್ಲೆಗಳಾದ ಬಿಜಾಪುರ, ಬೀದರ್, ಗುಲ್ಬರ್ಗ, ರಾಯಚೂರು, ಬಳ್ಳಾರಿ, ಚಿತ್ರದುರ್ಗ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಇವರ ನೆಲೆಗಳು ಪ್ರಧಾನವಾಗಿ ಕಂಡುಬರುತ್ತವೆ. ಒಟ್ಟಾರೆ ಇತಿಹಾಸ ತಿಳಿಸುವಂತೆ ಇವರು ಮೂಲತಃ ಅರಬ್ ರಾಷ್ಟ್ರದ 'ಮೆಕ್ಕಾ' ಎಂಬ ಪಟ್ಟಣದ ಹತ್ತಿರ ನದಾಫ್ ಎಂಬ ಹಳ್ಳಿಯ ಮೂಲದವರು. ಮೊಘಲರ ಆಡಳಿತದ ಕಾಲದಲ್ಲಿ ವ್ಯಾಪಾರದ ದೃಷ್ಟಿಯಿಂದ ಇವರು ಭಾರತಕ್ಕೆ ವಲಸೆ ಬಂದವರು. ಆ ಸಂದರ್ಭದಲ್ಲಿ ವ್ಯಾಪಕ ಪ್ರಮಾಣದಲ್ಲಿ ಮತಾಂತರ ನಡೆದಿದ್ದು, ಉತ್ತರದಿಂದ ದಕ್ಷಿಣಕ್ಕೆ ವಲಸೆ ಬಂದವರಲ್ಲಿ ಈ ಪಿಂಜಾರರು ಪ್ರಮುಖರು. ಭಾರತದ ಸಾಮಾಜಿಕ ಇತಿಹಾಸದಲ್ಲಿ ಪಿಂಜಾರರು ಪ್ರಬಲವಾಗಿ ಇಲ್ಲಿನ ಆರ್ಥಿಕ ಸ್ಥಿತಿಗತಿಗಳು ನಿಯಂತ್ರಿಸುವುದರಿಂದ ತಮ್ಮ ವೃತ್ತಿಗೆ ಅಂಟಿಕೊಳ್ಳಲಾಗದಂತಹ ಗೊಂದಲದಲ್ಲಿ ತಮಗೆ ಸಾಧ್ಯವಾದ ಇನ್ನಿತರ ಉಪಕಸುಬುಗಳನ್ನು ಆಶ್ರಯಿಸುವುದು ಅನಿವಾರ್ಯವಾಗಿದೆ. ಆಧುನಿಕ ಕೈಗಾರಿಕೆಗಳು ಬಂದ ನಂತರ ಪಿಂಜಾರರು ತಮ್ಮ ಮೂಲ ವೃತ್ತಿಯನ್ನು ಮುಂದುವರೆಸಿಕೊಂಡು ಬದುಕಲಾಗದೆ ಸ್ವಂತ ಬಂಡವಾಳವಾಗಲಿ, ಸರಕಾರದ ಅನುದಾನವಾಗಲಿ ಇಲ್ಲದೇ ಹೊಟ್ಟೆಪಾಡಿಗೆ ಕೂಲಿ ಕೆಲಸ ಮಾಡುವುದು, ಸಣ್ಣಪುಟ್ಟ ಅಂಗಡಿಗಳಂತಹ ಪರ್ಯಾಯ ಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಬದುಕು ಸಾಗಿಸುತ್ತಿದ್ದಾರೆ.

ಪಿಂಜಾರ ಸಮುದಾಯವನ್ನೇ ಪ್ರಧಾನವಾಗಿ ಅಧ್ಯಯನ ಮಾಡುವ ಅಗತ್ಯವಿದೆ ಎಂದೆನಿಸಿದೆ. ಕಾರಣ ರಾಯಚೂರಿನ ಭಾಗದಲ್ಲಿ ಕಳೆದ ಶತಮಾನದಲ್ಲಿ ಸ್ಥಾಪನೆಗೊಂಡ ಹಟ್ಟಿ ಚಿನ್ನದಗಣಿ, ಥರ್ಮಲ್ ವಿದ್ಯುತ್ ಸ್ಥಾವರ, ಸುರಾನ ಫ್ಯಾಕ್ಟರಿಗಳು, ಶಿಲ್ಪ

ಅಂಟಿಬ್ಯಾಟಿಕ್ ಫ್ಯಾಕ್ಟರಿ, ಶಿಲ್ಪ ಪ್ಯಾರಾಸಿಟಮಾಲ್, ಇಂತಹ ಕೆಲವು ಕಂಪನಿಗಳಲ್ಲಿ ಮುಂತಾದ ಉದ್ಯೋಗ ಅವಕಾಶಗಳು ದೊರೆತವು. ಅಲ್ಲಿನ ಕೆಲಸಗಾರರಿಗೆ ವಸತಿ ಸೌಲಭ್ಯ, ಹೊಟೇಲ್, ಮಹಲುಗಳು, ಇನ್ನಿತರ ಸೌಲಭ್ಯಗಳನ್ನು ಆಧುನಿಕ ರೀತಿಯಲ್ಲಿ ಒದಗಿಸಬೇಕಾಯಿತು. ಇದು ತನ್ನಿಂದ ತಾನೇ ವೃತ್ತಿಯಲ್ಲಿ ಬದಲಾವಣೆಯನ್ನು ತಂದಿತು. ಹೀಗೆ ಪಾರಂಪರಿಕ ಕಸುಬುಗಳು ಮತ್ತು ಆಧುನಿಕ ಮುಖಾಮುಖಿಯ ಆರಂಭಕ್ಕೆ ಪಿಂಜಾರ ಸಮುದಾಯವು ಒಗ್ಗಿಕೊಂಡಿತು.

ಮೈಸೂರು ಗೆಜೆಟಿಯರ್ ಮತ್ತು ಮೈಸೂರು ವಿಶ್ವವಿದ್ಯಾಲಯದ ಈ ಎರಡು ಅಧ್ಯಯನಗಳು ಸದ್ಯಕ್ಕೆ ಅಧಿಕೃತ ದಾಖಲೆಗಳಾಗಿ ಪಿಂಜಾರ ಸಮುದಾಯದ ಬಗೆಗೆ ಬೆಳಕು ಚೆಲ್ಲಿವೆ.

## ೧.೧. ಅಧ್ಯಯನದ ವ್ಯಾಪ್ತಿ

ರಾಯಚೂರು ಜಿಲ್ಲೆಯಲ್ಲಿ ಕಂಡುಬರುವ ಸಿಂಧನೂರು, ಮಾನ್ವಿ, ದೇವದುರ್ಗ, ರಾಯಚೂರು, ಲಿಂಗಸೂರು ಈ ಐದು ತಾಲೂಕುಗಳಲ್ಲಿ ನೆಲೆಸಿರುವ ಪಿಂಜಾರ ಸಮುದಾಯವನ್ನು ಮಾತ್ರ ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಡೀ ರಾಯಚೂರು ಜಿಲ್ಲೆಯಲ್ಲಿನ ಪಿಂಜಾರರ ಕಸುಬುಗಳನ್ನು ಅಧ್ಯಯನ ವ್ಯಾಪ್ತಿಯಲ್ಲಿ ಸೀಮಿತಗೊಳಿಸಿಕೊಂಡಿದೆ. ಪಿಂಜಾರ ಸಂಸ್ಕೃತಿಯನ್ನು ಅಗತ್ಯ ಬಿದ್ದಾಗ ಮಾತ್ರ ಬಳಸಲಾಗಿದೆ. ಈ ಅಧ್ಯಯನದ ವ್ಯಾಪ್ತಿ ಪಿಂಜಾರ ಸಮುದಾಯದ ಕಸುಬುಗಳೇ ಹೊರತು ಪಿಂಜಾರರ ಸಾಂಸ್ಕೃತಿಯನ್ನಲ್ಲ. ಕಸುಬುಗಳು ಸಹ ಸಂಸ್ಕೃತಿಯ ಒಂದು ಭಾಗ. ಈ ಭಾಗವನ್ನು ಮಾತ್ರ ಅಧ್ಯಯನಕ್ಕೆ ವ್ಯಾಪ್ತಿಯಾಗಿಸಿಕೊಳ್ಳಲಾಗಿದೆ.

## ೧.೨. ಅಧ್ಯಯನದ ಉದ್ದೇಶ

- ಪಿಂಜಾರರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಕಸುಬುಗಳ ನೆಲೆಯಲ್ಲಿ ತಿಳಿಯುವುದು.

- ಧಾರ್ಮಿಕ ನಂಬಿಕೆಗಳು, ಆಚರಣೆಗಳು ಮತ್ತು ಅವುಗಳಲ್ಲಿ ಉಂಟಾಗಿರುವ ಬದಲಾವಣೆಯನ್ನು ಪಾರಂಪರಿಕ ಮತ್ತು ಆಧುನಿಕತೆಗೆ ಕಸುಬುಗಳು ಹೇಗೆ ಮುಖಾಮುಖಿಯಾಗಿವೆ ಎಂಬುವುದನ್ನು ಗುರುತಿಸುವುದು.

- ಆರ್ಥಿಕ ಬದಲಾವಣೆಯಿಂದ ಆದ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸುವುದು.

ಪಿಂಜಾರರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯುವುದು. ಅಭಿವೃದ್ಧಿ

ಹೊಂದಲು ತಮ್ಮ ಬುದ್ಧಿಶಕ್ತಿಯಿಂದ ವೃತ್ತಿ ಕೌಶಲ್ಯವನ್ನು ಅವಲಂಬಿಸಿ ದುಡಿಯಲು ಪ್ರಾರಂಭಿಸಿದ ಪಿಂಜಾರರು ತಮ್ಮ ಶ್ರಮವಹಿಸಿ ವೃತ್ತಿಯನ್ನು ಕಾಪಾಡಿಕೊಂಡು ಬರುವುದರಲ್ಲಿ ಹಿಂದುಳಿದಿದ್ದಾರೆ. ಇಂತಹ ಗಾದಿ, ದಿಂಬು ಮಾಡುವ ಪಿಂಜಾರರು ಇಂದು ಗುರುತಿಸುವಿಕೆಯಿಂದಲೂ ಹಿಂದುಳಿದಿದ್ದು, ಮಾನವ ಅಭಿವೃದ್ಧಿಗೆ ಹಿನ್ನೆಡೆಯಾಗಿ ಪರಿಣಮಿಸಿದೆ. ಈ ಹಿಂದುಳಿಯುವಿಕೆಯಿಂದ ಇನ್ನಷ್ಟು ಬಡತನ ಮತ್ತು ನಿರುದ್ಯೋಗದ ಪ್ರಮಾಣ ಹೆಚ್ಚಾಗುವುದರಲ್ಲಿ ಸಂದೇಹವೇ ಇಲ್ಲ ಎಂದು ಹೇಳಬಹುದು.

ಆಧುನಿಕ ತಂತ್ರಜ್ಞಾನ, ಜಾಗತೀಕರಣ ಇವುಗಳ ಪ್ರಭಾವದಿಂದ ತಮ್ಮ ಮೂಲ ವೃತ್ತಿಯಾದ ಗಾದಿ, ದಿಂಬು ತಯಾರಿಕೆ ಕಸುಬುಗಳು ಆರ್ಥಿಕವಾಗಿ ಅನೇಕ ಸಮಸ್ಯೆ ಮತ್ತು ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಜಾಗತೀಕರಣದಿಂದ ಎಷ್ಟೋ ಕುಟುಂಬಗಳು ಬಡತನದಿಂದ ನರಳುತ್ತಿವೆ. ಹಸಿವು, ಬಟ್ಟೆ, ಆರೋಗ್ಯ, ವಸತಿ, ಇನ್ನಿತರೆ ರೀತಿಯ ಮೂಲಭೂತ ಸೌಕರ್ಯಗಳಿಂದಲೂ ಕೂಡ ಜನರು ಹಿಂದುಳಿಯುವಂತಹ ಸಂದರ್ಭಗಳು ಬಂದೊದಗಿವೆ. ಜೊತೆಗೆ ಮಹಿಳೆಯರು ಕೂಡ ಹೆಚ್ಚಾಗಿ ಕಷ್ಟ ಕಾರ್ಪಣ್ಯಗಳಿಗೆ ಒಳಗಾಗುತ್ತಿದ್ದಾರೆ. ಇದಕ್ಕೆ ಕಾರಣಗಳನ್ನು ಶೋಧಿಸಿ, ಉಪಯುಕ್ತ ಸಲಹೆಗಳನ್ನು ಅಧ್ಯಯನದಲ್ಲಿ ಮಾಡಲಾಗಿದೆ.

ಗುಡಿ ಕೈಗಾರಿಕೆಯಾಗಿ ಈ ಹಾಸಿಗೆ, ದಿಂಬು ತಯಾರಿಸುತ್ತಿದ್ದ ಪಿಂಜಾರರು ಯಂತ್ರದ ಮೂಲಕ ತಯಾರಾಗಿ ಬಂದ ನವಿರಾದ ಹಾಸಿಗೆ, ದಿಂಬುಗಳ ಸವಾಲನ್ನು ಎದುರಿಸಬೇಕಾಯಿತು. ಈ ಮುಖಾಮುಖಿಯನ್ನು ಚಾರಿತ್ರಿಕವಾಗಿ ಅಧ್ಯಯನ ಮಾಡಲು ಉದ್ದೇಶಿಸಲಾಗಿದೆ.

**ಊಹೆಗಳು:**

೧) ಪಿಂಜಾರರು ಸಾಮಾಜಿಕ ಮತ್ತು ಆರ್ಥಿಕವಾಗಿ ಸಂಕಷ್ಟದಲ್ಲಿದ್ದಾರೆ.

೨) ಪಾರಂಪರಿಕ ಕಸುಬನ್ನು ಕೈಬಿಟ್ಟು ಪರ್ಯಾಯ ಕಸುಬುಗಳಲ್ಲಿ ಅವಲಂಬಿಸಿದ್ದಾರೆ.

೩) ಮುಸ್ಲಿಂ ಧರ್ಮದಲ್ಲಿ ಪಿಂಜಾರ ಸಮುದಾಯವು ಒಂದು ಉಪಪಂಗಡವಾಗಿದೆ.

## ೧.೩. ಅಧ್ಯಯನದ ಸ್ವರೂಪ

ಪ್ರಸ್ತುತ ಈ ನಿಬಂಧವು ಒಟ್ಟು ನಾಲ್ಕು ಅಧ್ಯಾಯಗಳನ್ನು ಒಳಗೊಂಡಿದೆ.

ಅಧ್ಯಾಯ ಒಂದರಲ್ಲಿ ಪ್ರಸ್ತಾವನೆ, ಸ್ವರೂಪ, ವ್ಯಾಪ್ತಿ, ಮಹತ್ವ, ವಿಧಾನ, ಅಧ್ಯಯನದ ಪ್ರಸ್ತುತತೆ ನಂತರ ಪಿಂಜಾರರ ಕುರಿತು ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳನ್ನು

ಪರಿಶೀಲಿಸಲಾಗಿದೆ. ನಂತರ ಪಿಂಜಾರರ ಪರಿಚಯ, ಭೌಗೋಳಿಕ, ಚಾರಿತ್ರಿಕ ವಿವರಗಳನ್ನು ನೀಡುವುದರ ಜೊತೆಗೆ ರಾಯಚೂರು ಜಿಲ್ಲೆಯಲ್ಲಿ ವಾಸವಾಗಿರುವ ಪಿಂಜಾರರ ಮೂಲದ ಬಗೆಗಿನ ಮಾಹಿತಿ ಹಾಗೂ ಈ ಜಿಲ್ಲೆಯಲ್ಲಿ ಪಿಂಜಾರರು ನೆಲೆಗೊಂಡಿರುವ ವಿವಿಧ ಸ್ಥಳ ಪರಿಚಯ ಮುಖ್ಯವಾಗಿ ಅಧ್ಯಯನದ ವ್ಯಾಪ್ತಿಗೆ ಸೇರ್ಪಡಿಸಿಕೊಂಡು ಪಿಂಜಾರರ ಪರಿಚಯವನ್ನು ನೀಡಲಾಗಿದೆ.

ಅಧ್ಯಾಯ ಎರಡರಲ್ಲಿ ಒಟ್ಟಾರೆ ಪಿಂಜಾರ ಸಮುದಾಯದ ಪಾರಂಪರಿಕ ಕಸುಬುಗಳು ಹಾಗೂ ಪಾರಂಪರಿಕ ಉಪಕಸುಬುಗಳ ಮುಂದುವರಿಕೆ ಕುರಿತು ಕೂಲಂಕಷವಾಗಿ ವಿವರಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಪಿಂಜಾರ ಸಮುದಾಯದ ಪಾರಂಪರಿಕ ಕಸುಬಿನ ಕುರಿತು ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಪಾರಂಪರಿಕ ಕಸುಬು ಹಾಗೂ ಆಧುನಿಕ ಮುಖಾಮುಖಿ, ಬೃಹತ್ ಕೈಗಾರಿಕೆಗಳ ಪ್ರಭಾವ, ಬಂಡವಾಳಶಾಹಿಗಳ ಪ್ರವೇಶ, ಪರ್ಯಾಯ ಕಸುಬಿನ ಅವಲಂಬನೆ, ಪಿಂಜಾರ ಸಮುದಾಯದ ಪ್ರಸ್ತುತತೆಯ ಸ್ಥಿತಿಗತಿಗಳ ಕುರಿತು ವಿಶ್ಲೇಷಣೆ ಮಾಡಲಾಗಿದೆ.

ಅಧ್ಯಾಯ ಐದು ಸಮಾರೋಪವನ್ನು ಒಳಗೊಂಡಿದ್ದು, ಪಿಂಜಾರ ಸಮುದಾಯದ ಪಾರಂಪರಿಕ ಕಸುಬು: ಆಧುನಿಕ ಮುಖಾಮುಖಿ ಎಂಬ ವಿಷಯ ಕುರಿತು ಅಧ್ಯಯನದ ಫಲಿತಗಳನ್ನು ಹಾಗೂ ಅಧ್ಯಯನದ ಸಾಧ್ಯತೆಗಳನ್ನು ದಾಖಲಿಸಲಾಗಿದೆ.

### ೧.೪. ಅಧ್ಯಯನದ ವಿಧಾನ

೧) **ಕ್ಷೇತ್ರಕಾರ್ಯ ವಿಧಾನ:** ಪಿಂಜಾರರ ಸಮುದಾಯದ ಬಗ್ಗೆ ಕ್ಷೇತ್ರ ಕಾರ್ಯ ಕೈಗೊಂಡು ಅವರ ಪಾರಂಪರಿಕ ಕಸುಬಿನ ಬಗ್ಗೆ ಮತ್ತು ವಿವಿಧ ಬಗೆಯ ಕೆಲಸಗಾರರನ್ನು ಸಂದರ್ಶಿಸಿ ಮಾಹಿತಿ ಪಡೆದು ಅದನ್ನು ಬಳಸಿಕೊಳ್ಳಲಾಗಿದೆ.

೨) **ಪ್ರಶ್ನಾವಳಿ ವಿಧಾನ:** ಸಮುದಾಯ ಕುರಿತು ಪ್ರಶ್ನಾವಳಿಯನ್ನು ತಯಾರಿಸಿಕೊಂಡು ಸಂಬಂಧಿಸಿದ ಮಹಿಳೆ, ಪುರುಷ, ಮಕ್ಕಳು, ಹಿರಿಯ ಸಮುದಾಯದ ಜನರಿಂದ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ.

೩) **ಅವಲೋಕನ:** ಪಿಂಜಾರ ಸಮುದಾಯ ಮಾಹಿತಿ ಸಂಗ್ರಹಿಸಲು ಕ್ಷೇತ್ರಕಾರ್ಯದಲ್ಲಿ ಅವಲೋಕನ ವಿಧಾನ ಅತೀ ಮುಖ್ಯವಾಗಿರುವುದರಿಂದ ಈ ಅವಲೋಕನ ವಿಧಾನವನ್ನು ಬಳಸಿಕೊಳ್ಳಲಾಗಿದೆ.

**೪) ಸಂದರ್ಶನ ವಿಧಾನ:** ಪಿಂಜಾರರಲ್ಲಿನ ವೃತ್ತಿ, ಕೃಷಿ, ಸಾಮಾಜಿಕ ಅಂಶಗಳು, ಆರ್ಥಿಕತೆ, ಶೈಕ್ಷಣಿಕ ಮಟ್ಟ, ಸಾಂಸ್ಕೃತಿಕ ಅಂಶಗಳಲ್ಲಿನ ಪರಿವರ್ತನೆಯನ್ನು ತಿಳಿದುಕೊಳ್ಳಲು ಸಮುದಾಯದ ಸದಸ್ಯರನ್ನು ನೇರವಾಗಿ ಸಂದರ್ಶಿಸುವ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ.

**೫) ಚಾರಿತ್ರಿಕ ವಿಧಾನ:** ಪಿಂಜಾರ ಸಮುದಾಯವು ರಾಜ್ಯದಲ್ಲಿ ವೈಶಿಷ್ಟ್ಯತೆಯಿಂದ ಕೂಡಿದ್ದು, ಈ ಹಿನ್ನೆಲೆಯಲ್ಲಿ ಲಭ್ಯವಿರುವ ಎಲ್ಲಾ ಸಾಹಿತ್ಯಿಕ ಇತರೆ ಮೂಲಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ.

ಪಿಂಜಾರರ ಭಾಷೆ, ಆಚರಣೆಗಳ ಹಿಂದಿನ ಪ್ರಭಾವಗಳು ಮತ್ತು ನಂಬಿಕೆಗಳು ಪರಂಪರಾಗತ ಬದುಕಿಗೆ ಅನೇಕ ಹೊಸರೂಪ ಸ್ಪರ್ಶಗಳನ್ನುಂಟು ಮಾಡಿರುವ ಆಧುನಿಕ ಪ್ರೇರಣೆಗಳು ಬದಲಾಗುತ್ತಿರುವ ಸಾಮಾಜಿಕ ಪರಿಸರದಲ್ಲಿ ಇಂಥ ಸಮುದಾಯಗಳು ಹೇಗೆ ತಮ್ಮ ಸಂಸ್ಕೃತಿಯ ನೆಲೆಗಳನ್ನು ಉಳಿಸಿಕೊಳ್ಳುತ್ತವೆ? ಎಂಬ ಬಗ್ಗೆ ವಿಸ್ತಾರವಾಗಿ ತಿಳಿದುಕೊಳ್ಳಲು ಸಾಧ್ಯವಾಗಿದೆ.

### ೧.೫. ಅಧ್ಯಯನದ ಪ್ರಸ್ತುತತೆ

ಪಿಂಜಾರರ ಒಟ್ಟಾರೆ ಐತಿಹಾಸಿಕ ಹಿನ್ನೆಲೆ ನೋಡಿದಾಗ ಅಧ್ಯಯನದ ಪ್ರಸ್ತುತತೆ ಬಹಳ ಅವಶ್ಯಕತೆಯಾಗುತ್ತದೆ. ಪಿಂಜಾರರು ಒಟ್ಟಾರೆ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಪಾರಂಪರಿಕ, ಸಾಂಸ್ಕೃತಿಕ, ಧಾರ್ಮಿಕತೆ, ರೂಢಿ ಆಚರಣೆಗಳು, ಬದುಕನ್ನು ನಡೆಸುವ ಬಗ್ಗೆ ತಿಳಿಯಬಹುದಾಗಿದೆ.

ಆಧುನಿಕತೆಯಿಂದಾಗಿ ಪಾರಂಪರಿಕವಾಗಿ ನಂಬಿಕೊಂಡು ಬಂದು ಕಸುಬುಗಳು ಯಾವ ಸ್ಥಿತ್ಯಂತರದಲ್ಲಿದೆ ಎಂಬ ಪ್ರಶ್ನೆ ಸಹಜವಾಗಿ ಕಾಡುತ್ತದೆ. ಇವೆರಡರ ಮುಖಾಮುಖಿಯಿಂದ ನ್ಯಾಯಯುತ ಫಲಿತ ಸಾಧ್ಯ. ಕೂಲಿ ಕಾರ್ಮಿಕರು, ಕೃಷಿಕಾರ್ಮಿಕರು, ಸರ್ಕಾರಿ ಉದ್ಯೋಗಿಗಳು, ಗುಡಿಕೈಗಾರಿಕೆ ಇತರೆಯಾಗಿ ಪಿಂಜಾರ ಸಮುದಾಯದವರು ಹೆಜ್ಜೆ ಇಟ್ಟಿದ್ದಾರೆ. ಇವರ ಜವಾಬ್ದಾರಿಯು ಪಾಲ್ಗೊಳ್ಳುವಿಕೆಯಲ್ಲಿನ ಅನನ್ಯತೆಯನ್ನು ಗಂಭೀರವಾಗಿ ಗಮನಿಸುವ ಪ್ರಸ್ತುತತೆ ಇದೆ.

ಸರ್ಕಾರವು ಪಿಂಜಾರ ಸಮುದಾಯಕ್ಕೆ ಶೈಕ್ಷಣಿಕ ಮತ್ತು ಉದ್ಯೋಗಕ್ಕಾಗಿ ನೀಡಿರುವ ಅವಕಾಶಗಳು, ಸರ್ಕಾರದ ಯೋಜನೆಗಳಲ್ಲಿ ಪಿಂಜಾರರಿಗೆ ಒದಗಿಸಿರುವ ಆರ್ಥಿಕ ಭದ್ರತೆಯನ್ನು ಕುರಿತು ಕೈಗೊಂಡಿರುವ ಕಾರ್ಯಕ್ರಮಗಳ ಬಗ್ಗೆ ತಾಳಿರುವ ನಿಲುವುಗಳ ಚರ್ಚೆ.

## ೧.೬. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಪಿಂಜಾರ ಸಮುದಾಯದ ಬಗೆಗಿನ ಅಧ್ಯಯನಗಳು ಸಾಕಷ್ಟು ನಡೆದಿಲ್ಲ ಎಂದೇ ಹೇಳಬೇಕಾಗುತ್ತದೆ. ಸಾಹಿತ್ಯಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಹರಡಿ ಬೆಳೆದಿರುವುದರಲ್ಲಿ ಮುಸ್ಲಿಂ ಸಮುದಾಯವು ಒಂದು. ಇದರ ಒಳಪಂಗಡಗಳ ಬಗೆಗಿನ ನಿಲುವನ್ನು ಅಷ್ಟೇ ರಾಜಕೀಯವಾಗಿ, ಸಾಮಾಜಿಕವಾಗಿ ನಿರ್ಲಕ್ಷ್ಯ ಮಾಡಿದೆ. ಶೇಕ್, ಸೈಯದ್, ಮಹಮ್ಮದ್, ಪಠಾಣ್, ಶಿಯಾ, ಸುನ್ನಿ, ನದಾಫ್/ಪಿಂಜಾರ, ದರವೇಶಿ ಸಮುದಾಯಗಳಿವೆ. ಆದರೆ ಪಿಂಜಾರರ ಬಗೆಗಿನ ಅಧ್ಯಯನ ಗಮನಾರ್ಹವಾಗಿ ನಡೆದಿಲ್ಲ.

- ಸಿ.ಹಯವದನರಾವ್ ಅವರು ಮೈಸೂರು ಗೆಜೆಟಿಯರ್ ಸಂಪುಟ-೨ನ್ನು ಸಂಪಾದಿಸಿದ್ದಾರೆ. ಪಿಂಜಾರ ಸಮುದಾಯದ ಸಂಸ್ಕೃತಿಯನ್ನು ಕುರಿತು ಪ್ರಸ್ತಾಪ ಮಾಡಿದ್ದಾರೆ. ಪಿಂಜಾರರ ಮೂಲವನ್ನು ಗುರುತಿಸುವ ಪ್ರಯತ್ನ ನಡೆಸಿದ್ದಾರೆ. ಚಾರಿತ್ರಿಕ ಹಿನ್ನೆಲೆಯಲ್ಲಿ ಪಿಂಜಾರರ ಮೂಲವನ್ನು ಉಲ್ಲೇಖಿಸಿದ್ದಾರೆ. ಇದು ಕರ್ನಾಟಕದ ಮಟ್ಟಿಗೆ ನಡೆದ ಪಿಂಜಾರರ ಕುರಿತ ಸೂಕ್ಷ್ಮ ಅಧ್ಯಯನವೆನಿಸಿದೆ.

- ಮೈಸೂರು ವಿಶ್ವವಿದ್ಯಾಲಯವು ಹೆಚ್.ವಿ.ನಂಜುಂಡಯ್ಯ ಮತ್ತು ಎಲ್.ಕೆ.ಅನಂತಕೃಷ್ಣ ಅಯ್ಯರ್ ಅವರಿಂದ ಸಂಪಾದಿಸಿದ 'ದ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್' ಸಂಪುಟ-೪ರಲ್ಲಿ ಪಿಂಜಾರ ಸಂಸ್ಕೃತಿಯನ್ನು ಚರ್ಚಿಸಿದ್ದಾರೆ. ಅವರ ಕಸುಬನ್ನು ಕುರಿತು ವಿಶ್ಲೇಷಿಸಿದ್ದಾರೆ. ಪಿಂಜಾರ ಸಂಸ್ಕೃತಿಯ ಪ್ರಧಾನ ನೆಲೆಗಳನ್ನು ತೋರಿಸಿದ್ದಾರೆ. ಈ ಎರಡು ಅಧ್ಯಯನಗಳು ಸಹ ಸ್ವಾತಂತ್ರ್ಯಪೂರ್ವದಲ್ಲಿ ನಡೆದಿವೆ.

- ಬರಗೂರು ರಾಮಚಂದ್ರಪ್ಪನವರ ಪ್ರಧಾನ ಸಂಪಾದಕತ್ವದಲ್ಲಿ ಕರ್ನಾಟಕದಲ್ಲಿ ಉಪ ಸಂಸ್ಕೃತಿಯನ್ನು ಕುರಿತು ಅಧ್ಯಯನ ಶುರು ಮಾಡಿದರು. ಇದರ ಅಡಿಯಲ್ಲಿ 'ಪಿಂಜಾರರ ಸಂಸ್ಕೃತಿ' ಕುರಿತು ಬಿ.ಸಿ.ದಾದಾಪೀರ್ ಅಧ್ಯಯನ ಮಾಡಿದ್ದಾರೆ. ಇವರು ಪಿಂಜಾರರ ಜೀವನ ವಿಧಾನ, ಸಾಮಾಜಿಕ ಬದುಕು, ಭಾಷೆ, ಸಾಹಿತ್ಯ, ಆಚರಣೆ, ಕಲೆ, ಸಾಹಿತ್ಯ ಕುರಿತು ತಮ್ಮ ಅಧ್ಯಯನವನ್ನು ನಡೆಸಿದ್ದಾರೆ. ಆದರೂ "ಪಿಂಜಾರರ ಸಮುದಾಯದ ಪಾರಂಪರಿಕ ಕಸುಬು: ಆಧುನಿಕ ಮುಖಾಮುಖಿ" ಕುರಿತಾದ ಅಧ್ಯಯನ ಇದುವರೆಗೂ ನಡೆದಿಲ್ಲವೆಂದೇ ಹೇಳಬಹುದು. ಆದುದರಿಂದ ಇಂತಹ ಒಂದು ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

- ಪಿಂಜಾರ ಸುಮುದಾಯದ ಬಗ್ಗೆ ಪತ್ರಿಕೆಗಳಲ್ಲಿ, ಸ್ಮರಣ ಸಂಚಿಕೆಗಳಲ್ಲಿ, ಸಂಪಾದಿತ ಕೃತಿಗಳಲ್ಲಿ, ಸ್ವರಚಿತ ಕೃತಿಗಳಲ್ಲಿ, ಸಂಶೋಧನ ಲೇಖನಗಳು ಪ್ರಕಟಗೊಂಡಿರುವ

ಅಂಶ ತಿಳಿದುಬರುತ್ತದೆ. ಅವುಗಳಲ್ಲಿ ಪ್ರಮುಖವಾಗಿ ದಾದಾಪೀರ್. ಬಿ.ಸಿ. ಕರ್ನಾಟಕದ ಪಿಂಜಾರರು, ಪಿಹೆಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ೨೦೦೩ ಎಂಬ (ಅಪ್ರಕಟಿತ) ಮಹಾಪ್ರಬಂಧದಲ್ಲಿ, ಪಿಂಜಾರರ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ ಬಹಳ ಪಿಂಜಾರರ ಭಾಷೆ ಮತ್ತು ಸಾಹಿತ್ಯ, ಆಚರಣೆ ಮತ್ತು ಕಲೆ, ಪ್ರದರ್ಶನಾತ್ಮಕ ಕತೆಗಳು, ಸಾಮಾಜಿಕ ಪರಿವರ್ತನೆ ಹಿನ್ನೆಲೆಯಲ್ಲಿ ಪಿಂಜಾರರ ಕುರಿತು ಮಾಹಿತಿ ನೀಡಿದ್ದಾರೆ. ದ್ವಿದಶಕದ ಸಾಧನೆ, ಬೆಳಗು ಎಂಬ ಸ್ಮರಣ ಸಂಚಿಕೆಯಲ್ಲಿ ಇಸ್ಲಾಂ ಧರ್ಮದ ಬುನಾದಿಗಳು, ನದಾಫ್ ಮಹಿಳೆಯರು ಅಭಿವೃದ್ಧಿಯತ್ತ ಕುರಿತು ಮಾಹಿತಿ ನೀಡಿದ್ದಾರೆ. ಆದರೂ “ಪಿಂಜಾರ ಸಮುದಾಯದ ಪಾರಂಪರಿಕ ಕಸುಬು: ಆಧುನಿಕ ಮುಖಾಮುಖಿ” ಕುರಿತಾದ ಅಧ್ಯಯನ ಇದುವರೆಗೂ ನಡೆದಿಲ್ಲವೆಂದೇ ಹೇಳಬಹುದು. ಆದುದರಿಂದ ಇಂತಹ ಒಂದು ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

## ಕೊನೆ ಟಿಪ್ಪಣಿಗಳು

೧. ಅಮರೇಶ ನುಗಡೋಣಿ, ಹೈದರಬಾದ್ ಕರ್ನಾಟಕದ ಹಾಡು-ಪಾಡು, ಪುಟ.೨೬

೨. ಕನ್ನಡ ನಿಘಂಟು ಆರನೆಯ ಸಂಪುಟ- ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು-೧೮ ಪುಟ. ೫೫೮೭

ಅಧ್ಯಾಯ ಎರಡು

## ೨.೧. ಪಿಂಜಾರ ಸಮುದಾಯದ ಚಾರಿತ್ರಿಕ ಹಿನ್ನೆಲೆ

'ಭಾರತೀಯ ಸಂಸ್ಕೃತಿ' ಪ್ರಧಾನ ಮತ್ತು ಕೇಂದ್ರ ತತ್ವದ್ದಾದರೆ ಇದರೊಳಗೆ 'ಉಪ ಸಂಸ್ಕೃತಿ'ಯ ಹಲವು ಚಹರೆಗಳು ಇವೆ. ಈ ಚಹರೆಗಳು ಒಂದೊಂದು ಸಂಸ್ಕೃತಿಯಾಗಿ ಬೆಳೆದಿವೆ. ಸಮುದಾಯ ಒಂದರ ಸಮಗ್ರ ಜೀವನ ವಿಧಾನಗಳ ಮೊತ್ತ ಈ ಸಂಸ್ಕೃತಿ. ಸದ್ಯ ಭಾರತದಲ್ಲಿ ಹಲವು ಸಮುದಾಯಗಳಿರುವಂತೆ ಹಲವು ಸಂಸ್ಕೃತಿಗಳಿವೆ. ಇವು ನಿನ್ನೆ, ಮೊನ್ನೆಯಿಂದ ರಚನೆಯಾದ ಸಮುದಾಯಗಳಲ್ಲ. ಆದರೆ ಸಂಸ್ಕೃತಿ ನಿರಂತರ ಪ್ರಕ್ರಿಯಾತ್ಮಕವಾದುದು. ಪ್ರಕೃತಿಗೆ ಮಾನವ ಹೊಂದಾಣಿಕೆ ಆಗುತ್ತಿದ್ದ. ಈಗ ಮಾನವ ಅಗತ್ಯಕ್ಕೆ ಪ್ರಕೃತಿ ಹೊಂದಿಕೆಯಾಗಬೇಕಾಗಿದೆ. ಇಲ್ಲಿ ಮನುಷ್ಯ ಏಕಕಾಲಕ್ಕೆ ತನ್ನ ಸಮುದಾಯದ ಸಂಸ್ಕೃತಿಯನ್ನು ಅದೇ ಕಾಲಕ್ಕೆ ಭಾರತೀಯ ಸಂಸ್ಕೃತಿಯನ್ನು ಪ್ರತಿನಿಧಿಸುತ್ತಾನೆ. ಇದು ಮುಸ್ಲಿಂ ಸಮುದಾಯದ ಒಳಪಂಗಡವಾದ ಈ ಪಿಂಜಾರ ಸಮುದಾಯದಲ್ಲಿ ಸಾಧ್ಯವಿದೆ.

### * ಮಧ್ಯಕಾಲೀನ ಸಂದರ್ಭದಲ್ಲಿ ಪಿಂಜಾರ ಸಮುದಾಯ

'ಮುಸ್ಲಿಂ ಸಂಸ್ಕೃತಿ'ಯೊಂದು ಭಾರತದಲ್ಲಿ ನೆಲೆಯೂರಲು ಅರಬ್ಬರ ಸಿಂಧ್‌ನ ಆಕ್ರಮಣಕಾರಣ ಧರ್ಮ ಪ್ರಸಾರ ಮತ್ತು ಸಂಪತ್ತು ವಶಪಡಿಸಿಕೊಳ್ಳುವುದು ಪ್ರಧಾನ ಕಾರಣವಾಗಿತ್ತು. ನಂತರದಲ್ಲಿ ಆಡಳಿತ ಮಾಡಲು ಸಿದ್ಧರಾದ ಟರ್ಕರ ಆಗಮನವಾಯಿತು. ಇವರಲ್ಲಿ ಘಜ್ನಿ ಮತ್ತು ಘೋರಿಯ ದಾಳಿಗಳು ಆದವು. ಅದರಲ್ಲಿ ಘೋರಿಗೆ ರಾಜ್ಯ ಸ್ಥಾಪನೆ ಮಾಡುವ ಆಸೆ ಚಿಗುರಿತ್ತು. ಇವನು ಭಾರತದಲ್ಲಿ ಟರ್ಕರ ಸಾಮ್ರಾಜ್ಯವನ್ನು ಹುಟ್ಟುಹಾಕುವ ಮೂಲಕ ಹೊಸ ಸಾಂಸ್ಕೃತಿಕತೆಯನ್ನು ತೆರೆದನು. ನಂತರದಲ್ಲಿ ದೆಹಲಿ ಮೊಘಲ್ ಸುಲ್ತಾನರ ಆಳ್ವಿಕೆ ನಡೆಸುತ್ತಿದ್ದ ಸಂದರ್ಭದಲ್ಲಿ 'ಇಸ್ಲಾಂ ಸಂಸ್ಕೃತಿ'ಯ ಪ್ರಭಾವ ಭಾರತದಲ್ಲಿ ನೆಲೆಯೂರಿತು.

"ಗ್ರಾಮ ಸಮುದಾಯಗಳು ಮತ್ತು ನಗರ ಪ್ರದೇಶಗಳಲ್ಲಿ ಬಣಗಳು ಹಾಗೂ ಮಂಡಳಿಗಳ ಮೂಲಕ ಕೈಗಾರಿಕೆಯ ವ್ಯವಸ್ಥೆ ಭಾರತದಲ್ಲಿತ್ತು. ಆಂತರಿಕ ಹಾಗೂ

ವಿದೇಶಿಯ ವಾಣಿಜ್ಯ ವ್ಯವಹಾರ ವ್ಯಾಪಕವಾಗಿ ನಡೆಯುತ್ತಿತ್ತು. ಸುಲ್ತಾನರು ತಮ್ಮ ಸ್ವಂತ ರಾಜಕೀಯ ಹಾಗೂ ಆಡಳಿತದ ಅಗತ್ಯಗಳಿಗೆಂದೆ ವ್ಯಾಪಾರ ಹಾಗೂ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಿದ್ದರು. ಸುಲ್ತಾನರು ಮಾಮೂಲಿ ಕೆಲಸಗಾರರ ಜೊತೆಗೆ ೪೦೦೦ ರೇಷ್ಮೆ ನೇಕಾರರನ್ನು ನೇಮಿಸಿಕೊಳ್ಳುತ್ತಿದ್ದರು. ಹೀಗಿರುವಂತೆ ಬೃಹತ್ ಪ್ರಮಾಣದ ಕೈಗಾರಿಕಾ ಕೇಂದ್ರವಾಗಲಿ, ಕಾರ್ಖಾನೆಗಳಾಗಲಿ ಇರಲಿಲ್ಲ. ಉತ್ಪಾದಕರು ಕೆಲವು ಸಲ ತಮ್ಮ ವಸ್ತುಗಳನ್ನು ತಾವೇ ಸಂತೆಗಳಲ್ಲಿ ಮಾರಿದರೂ ಹೆಚ್ಚಿನ ಸಂದರ್ಭಗಳಲ್ಲಿ ಅವರು ವ್ಯಾಪಾರಗಾರರಿಗೆ ನೇರವಾಗಿ ಮಾರಾಟ ಮಾಡುತ್ತಿದ್ದರು. ಉದ್ಯಮಶೀಲ ವ್ಯಾಪಾರಗಾರರು ಕೆಲವೊಮ್ಮೆ ತಮ್ಮ ಮೇಲ್ವಿಚಾರಣೆಯಲ್ಲಿ ವಸ್ತುಗಳ ಉತ್ಪಾದನೆಗೆ ಇವರಲ್ಲಿ ಅನೇಕರನ್ನು ನೇಮಿಸಿಕೊಳ್ಳುತ್ತಿದ್ದರು.

ಕೃಷಿಯೇ ಹೆಚ್ಚಿನ ಜನರ ಮುಖ್ಯ ಕಸುಬಾಗಿದ್ದರೂ ದೇಶದ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಪ್ರಮುಖವಾದ ಕೆಲವು ಕೈಗಾರಿಕೆಗಳಿದ್ದವು. ಹತ್ತಿ, ರೇಷ್ಮೆ ಹಾಗೂ ಉಣ್ಣೆ ಬಟ್ಟೆಗಳ ತಯಾರಿಕೆ ಸೇರಿದಂತೆ ವಸ್ತ್ರ ತಯಾರಿಕೆ, ಬಣ್ಣ ಹಾಕುವುದು, ಚಿತ್ರ ಮುದ್ರಣ, ಸಕ್ಕರೆ ಕೈಗಾರಿಕೆ, ಕಲ್ಲು ಕೆಲಸ, ಇಟ್ಟಿಗೆ, ಕಟ್ಟಡ ಕೆಲಸ, ಕಾಗದದ ತಯಾರಿಕೆ ಇವು ಮುಖ್ಯವಾಗಿದ್ದವು.

ಉಪ ಕೈಗಾರಿಕೆಗಳಲ್ಲಿ ಪಾದರಕ್ಷೆಗಳ ತಯಾರಿಕೆ, ಆಯುಧಗಳು ವಿಶೇಷವಾಗಿ ಬಿಲ್ಲು ಬಾಣಗಳ ತಯಾರಿಕೆ, ಸುಗಂಧ ದ್ರವ್ಯಗಳು, ಮಧ್ಯಸಾರ ಹಾಗೂ ಮಧ್ಯಗಳ ತಯಾರಿಕೆ ಇವು ಸೇರಿದ್ದವು."[೧]

ಇತಿಹಾಸಕಾರರು ಗುರುತಿಸಿರುವಂತೆ ಹತ್ತಿ, ಉಣ್ಣೆ, ರೇಷ್ಮೆ ಬಟ್ಟೆಗಳನ್ನು ಉತ್ಪಾದಿಸುವ ವರ್ಗಗಳು ಗ್ರಾಮ ಮತ್ತು ನಗರ ಸಮುದಾಯಗಳಲ್ಲಿ ವಿವಿಧ ರೀತಿಯ ಜನಸಮುದಾಯಗಳು ವಸ್ತ್ರ ತಯಾರಿಕೆ, ಬಣ್ಣ ಹಾಕುವುದು, ಚಿತ್ರ ಮುದ್ರಣ, ಕಟ್ಟಡ ಕೆಲಸ, ಇತ್ಯಾದಿಗಳಲ್ಲಿ ಮುಸ್ಲಿಂರ ಪಾಲ್ಗೊಳ್ಳುವಿಕೆ ಇದ್ದು ಇವರ ರಚನಾ ಶೈಲಿಗಳ ಕಟ್ಟಡಗಳನ್ನು ಭಾರತದಲ್ಲಿನ ಅನೇಕ ರಾಜರ ಸಂಸ್ಥಾನಗಳಲ್ಲಿ ಇಂದಿಗೂ ಗುರುತಿಸಬಹುದು.

ಧರ್ಮ ಪ್ರಸಾರ, ದಾಳಿಗಳು, ಸಾಮ್ರಾಜ್ಯ ಸ್ಥಾಪನೆ, ಇಸ್ಲಾಂ ಸಂಸ್ಕೃತಿಯ ಪ್ರಸಾರ, ಇನ್ನೂ ಅನೇಕ ಕಾರಣಗಳಿಂದ ಭಾರತದ ಮಟ್ಟಿಗೆ ಮುಸ್ಲಿಂ ಪ್ರಾಬಲ್ಯ ಶುರುವಾಯಿತು. ಕ್ರಿ.ಶ.೭೧೧ರ ಅರಬ್ಬರ ದಾಳಿಯಿಂದ ಕ್ರಿ.ಶ.೧೮೫೭ ಮೊಘಲರ ಕೊನೆಯ ಅರಸರವರೆಗೂ ಭಾರತದಲ್ಲಿ ಮುಸ್ಲಿಂ ಆಳ್ವಿಕೆ ಇದ್ದಿತು. ಈ ಕಾಲದ ಎಲ್ಲ ಸೂಕ್ಷ್ಮತೆಗಳನ್ನು ಗಮನಿಸಿದಾಗ ಆಯಾ ಆಳ್ವಿಕೆಯ ಸಂದರ್ಭದಲ್ಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಹಿತ್ಯಿಕ, ಸಾಂಸ್ಕೃತಿಕ ಬದಲಾವಣೆಗಳು ಆಯಾ ರಾಜರ ಪ್ರಭಾವಕ್ಕೆ ಒಳಗಾಗಿವೆ.

"ಬಂಗಾಳದಲ್ಲಿನ ಮನೆಗಳು ಇಟ್ಟಿಗೆಯಿಂದ ನಿರ್ಮಿಸಿದವಾಗಿದ್ದು, ಕೆಲವು ಮನೆಗಳು ಮೂರು ಮಹಡಿಗಳಿಂದ ಕೂಡಿದ್ದು ಸುಂದರ ವಿನ್ಯಾಸದಿಂದ ಕಟ್ಟಲ್ಪಟ್ಟಿದ್ದವು. ದಖನ್ ಪ್ರದೇಶದಲ್ಲಿ ಒಬ್ಬ ಶ್ರೀಮಂತ ಮನೆ ನಿರ್ಮಿಸಲು ಸುಮಾರು ೧,೫೦,೦೦೦ ರೂ.ಗಳನ್ನು ಖರ್ಚು ಮಾಡುತ್ತಿದ್ದನೆಂದು ಅಂದಾಜು ಮಾಡಲಾಗಿದೆ. ಪ್ರತಿಯೊಂದು ಮನೆಯೂ ಹಾಸಿಗೆಗಳು, ಕನ್ನಡಿಗಳು, ಕುರ್ಚಿಗಳು ಮುಂತಾದ ಪೀಠೋಪಕರಣಗಳಿಂದ ಕೂಡಿದ ಸುಸಜ್ಜಿತ ಮನೆಯಾಗಿದ್ದವು. ಅನೇಕ ನೋಬಲ್ಲರ ಮನೆಗಳ ನೆಲದ ಮೇಲೆ ರತ್ನಗಂಬಳಿಯನ್ನು ಹಾಸಿ ಅವುಗಳ ಮೇಲೆ ಸುಂದರವಾದ ದಿಂಬುಗಳನ್ನು ಅಲಂಕರಿಸುತ್ತಿದ್ದರು."[೨] ಎನ್ನುವ ಕೆಲವು ಮಾತುಗಳು ಇವೆ. "ಅಮುಕ್ತ ಮೌಲ್ಯದ' ಅಕ್ಕಸಾಲಿಗರ, ರೇಷ್ಮೆ ಬಟ್ಟೆಯುಟ್ಟುವವರ, ಕೋಮುಟಿಗರ, ಗೋಣಿಚೀಲ ತಯಾರಿಸುವವರ, ಕುಕ್ಕೆ ತಯಾರಿಸುವವರ ಮೊದಲಾದ ವೃತ್ತಿಪರ ಸಂಘದ ಬಗ್ಗೆ ವಿವರಣೆ ನೀಡುವುದಲ್ಲದೇ ಅವರು ತಮ್ಮ ಕಸುಬಿನಿಂದ ಬಂದ ಆದಾಯದಲ್ಲಿ ಸರಳ ಹಾಗೂ ನೆಮ್ಮದಿಯ ಜೀವನವನ್ನು ಸಾಗಿಸುತ್ತಿದ್ದರೆಂದು ತಿಳಿಸುತ್ತದೆ."[೩] ಈ ಮಾತುಗಳನ್ನು ಗಮನಿಸಿದಾಗ ಇಲ್ಲಿ ಬರುವ 'ದಿಂಬುಗಳು', ರತ್ನಗಂಬಳಿ, ವೃತ್ತಿಪರ ಸಂಘಗಳು ಎನ್ನುವ ಮಾತುಗಳು ಪಿಂಜಾರರನ್ನೇ ಸೂಚಿಸುತ್ತದೆ ಎನಿಸುತ್ತದೆ. ಪಿಂಜಾರರು ವೃತ್ತಿಪರ ಕಸುಬುಗಳನ್ನು ಮಾಡಿಕೊಂಡು ಜೀವನ ಸಾಗಿಸುವುದರ ನೇರ ಸುಳಿವು ಸಿಗುವುದಿಲ್ಲ. ಆದರೆ ಕೆಲ ವಸ್ತುಗಳನ್ನು ಗಮನಿಸಿದಾಗ ಇದ್ದಿರಬಹುದಾದ ಸಾಧ್ಯತೆಯೇ ಹೆಚ್ಚಿದೆ.

**ಕರ್ನಾಟಕದಲ್ಲಿ ಮುಸ್ಲಿಂ ಪಂಗಡಗಳ ಮತಾಂತರ ಹಿನ್ನೆಲೆ**

"ಕರ್ನಾಟಕದ ಮಟ್ಟಿಗೆ ಮಹಮದೀಯರ ಇತಿಹಾಸ ೮೦೦ ವರ್ಷಗಳಷ್ಟು ಹಳೆಯದಾದುದು."[೪] ೧೯೯೫ ಧರ್ಮ ಪ್ರಸಾರ ಸರ್ವಾಧಿಕಾರ ನಿರಂಕುಶ ಪ್ರಭುತ್ವ ರಾಜ್ಯ ವಿಸ್ತರಣೆ ಹೀಗೆ ಅನೇಕ ಬಗೆಯ ಆಕಾಂಕ್ಷೆಗಳಿಗೆ ಒಳಗಾದ ಪಿಂಜಾರ ಸಮುದಾಯವು ತನ್ನ ಸಮುದಾಯದ ಜನರನ್ನು ಸೇವೆಗೆ ಮೀಸಲಿಟ್ಟುಕೊಳ್ಳದೆ ಇರಲಾರದು. ಪಿಂಜಾರ ಸಮುದಾಯವು ಸಹ ತೀಕ್ಷಣವಾದ ಇವರ ಮತಾಂತರ ದಾಳಿಗೆ ಸಿಲುಕಿರಲೇಬೇಕು ಎನಿಸುತ್ತದೆ.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಉದ್ದೇಶವೇ ಹಿಂದೂಧರ್ಮದ ಉಳಿಯುವಿಕೆಗಾಗಿಯೇ ಸ್ಥಾಪನೆಯಾದದ್ದು ಮತ್ತು ಇದರ ಸುತ್ತ ಐದು ಬಹುಮನೀ ರಾಜ್ಯಗಳು ತಲೆ ಎತ್ತಿದವು. ಈ ರಾಜಕೀಯ ಚಕ್ರವ್ಯೂಹದಲ್ಲಿ ಮತಾಂತರದ ಗಾಳಿ ಬೀಸಿರಲೂಬಹುದು. ಇದನ್ನು ಸೂಕ್ಷ್ಮವಾಗಿ ಗ್ರಹಿಸಿದಾಗ ಹಿಂದೂ-ಮುಸ್ಲಿಂರ ಮತಾಂತರಗಳೇ ಪಿಂಜಾರ ಸಮುದಾಯ ಎಂದು ಹೇಳಲಿಕ್ಕೂ ಸಾಧ್ಯವಿದೆ.

"ಮಲ್ಲಿಕಾಫರನ ಅಜೇಯ ಹಾಗೂ ಭಯಂಕರ ದಾಳಿಯ ಸಂದರ್ಭ ಹಾಗೂ ಮೊಘಲರ ದೊರೆಗಳಾದ ಅಕ್ಬರ್ ಮತ್ತು ಔರಂಗಜೇಬರ ಆಡಳಿತದ ಸಮಯದಲ್ಲಿ ಮತಾಂತರವಾದ ಮಾಹಿತಿಗಳು ದೊರೆಯುತ್ತವೆ. ಕರ್ನಾಟಕದ ಸಂದರ್ಭದಲ್ಲಿ ಟಿಪ್ಪುಸುಲ್ತಾನನ ಕಾಲದಲ್ಲಿ ಹಾಗೂ ಬಿಜಾಪುರದ ಸುಲ್ತಾನ ರಣದುಲ್ಲಖಾನನ ಕಾಲದಲ್ಲಿ ಮತಾಂತರ ನಡೆದುದಾಗಿ ಅನೇಕ ಪಿಂಜಾರರೇ ಹೇಳುತ್ತಾರೆ. ಈ ಮಾಹಿತಿ ಹೇಳಿಕೆಗಳನ್ನು ಒಪ್ಪಬಹುದಾದರೂ ಮಹಮ್ಮದೀಯ ರಾಜರ ಆಡಳಿತಕ್ಕೆ ಮತಾಂತರದ ಆಸಕ್ತಿ ಹೇಗೆ ಉಂಟಾಯಿತು? ಎಂದು ಯೋಚಿಸಬೇಕಾಗಿದೆ. ಇಸ್ಲಾಂನ ಕೆಲ ಮತಾಂಧ ಮನಸ್ಸು ಮತ್ತು ವೈದಿಕ ಪ್ರೇರೇಣಿತವಾದ ಹಿಂದೂ ಧಾರ್ಮಿಕ ರಚನೆಯಲ್ಲಿನ ಮನುಷ್ಯ ವಿರೋಧ ಚಿಂತನೆಗಳು ಸೇರಿ ಮತಾಂತರಕ್ಕೆ ಪ್ರೇರಣೆಯನ್ನೊದಗಿಸಿದಂತಿದೆ."[೫] ಇಲ್ಲಿ ಮತಾಂತರ ಹಿನ್ನೆಲೆಯಿಂದ ಪಿಂಜಾರರ ಮೂಲವನ್ನು ಹುಡುಕಾಟ ಮಾಡುವುದು ಮತ್ತು ಊಹೆ ಮಾಡಿರುವುದೇ ಹೆಚ್ಚು ಇದೆ. ಪಿಂಜಾರ ಸಮುದಾಯವನ್ನು ಕುರಿತು ಸ್ಪಷ್ಟವಾದ ಇತಿಹಾಸವಿಲ್ಲದೆ ಹೋಗಿದೆ.

೧೪ನೆಯ ಶತಮಾನದ ಆರಂಭದವರೆಗೆ ದಕ್ಷಿಣ ಭಾರತವು ಮುಸ್ಲಿಂ ಆಕ್ರಮಣದಿಂದ ಮುಕ್ತವಾಗಿತ್ತು. ಸಾಮ್ರಾಜ್ಯಶಾಹಿ ನೀತಿಯನ್ನು ಅನುಸರಿಸಿದ ಅಲ್ಲಾವುದ್ದೀನ್ ಖಿಲ್ಜಿಯು ಕ್ರಿ.ಶ.೧೩೦೫-೧೩೧೨ರ ಅವಧಿಯಲ್ಲಿ ದಕ್ಷಿಣ ಭಾರತದ ಪ್ರಮುಖ ಹಿಂದೂ ರಾಜ್ಯಗಳನ್ನು ಜಯಿಸಿ ತನ್ನ ಪರಮಾಧಿಕಾರವನ್ನು ಸ್ಥಾಪಿಸಿದನು. ಹೀಗೆ ಅಲ್ಲಾವುದ್ದೀನ್ ಖಿಲ್ಜಿಯಾಗಲಿ ಅಥವಾ ಇವನಿಗಿಂತ ತೀರ ಭಿನ್ನವಾಗಿ ಹಲವಾರು ಪ್ರಾಂತ್ಯಗಳ ಮೇಲಿನ ದಿಗ್ವಿಜಯದ ನಂತರ ಇಸ್ಲಾಮಿನ ಸಾಂಸ್ಕೃತಿಕ ಬಹುರೂಪತೆಗೆ ಕಾರಣವಾಯಿತು.

ಕರ್ನಾಟಕದ ಮೈಸೂರನ್ನು ಹೈದರಾಲಿ ಮತ್ತು ಟಿಪ್ಪು ಆಳ್ವಿಕೆ ಮಾಡುತ್ತಿದ್ದಾಗ ಕಟ್ಟಡಗಳನ್ನು ಮುಸ್ಲಿಂ ಶೈಲಿಯಲ್ಲಿಯೇ ಕಟ್ಟಿಸಿದರು. ಧರ್ಮ ಸುಧಾರಣೆಯು 'ಸೂಫಿ'ಗಳಿಂದ ಮಧ್ಯಯುಗೀಯ ಭಾರತದಲ್ಲಿ ಜರುಗುತ್ತದೆ. ಇಲ್ಲಿ ನಿರ್ದಿಷ್ಟವಾಗಿ ಸಾಮಾಜಿಕ ಕಸುಬನ್ನು ಗುರುತಿಸುವುದು ಸ್ವಲ್ಪ ಕಷ್ಟ. ಪಿಂಜಾರ ಸಂಸ್ಕೃತಿಯು ಇದ್ದಿರಬಹುದು ಎಂದು ಊಹಿಸಬಹುದಷ್ಟೆ.

ಬಿ.ಸಿ.ದಾದಾಪೀರ್ ಗುರುತಿಸಿರುವಂತೆ "೧. ಪಿಂಜಾರರು ಎಂದು ಗುರುತಿಸಲಾಗುವ ಈ ಸಮುದಾಯವು ದೊರೆಗಳ ಕಾಲದ ಮತಾಂತರದ ಮೂಲಕ ಬಂದವರು. ೨. ಹಾಗೆ ಮತಾಂತರಕ್ಕೆ ಒಳಪಟ್ಟ ಸಮುದಾಯವನ್ನು ನಿರ್ದಿಷ್ಟವಾಗಿ ಗುರುತಿಸುವುದು ಕಷ್ಟವಾದರೂ ಹಿಂದೂ ಶೂದ್ರ ಸಮುದಾಯದ ಯಾವುದೇ ಸಮುದಾಯ ಎಂಬುದನ್ನು ಒಪ್ಪಬಹುದು. ೩) ಔರಂಗಜೇಬ್ ಮತ್ತು ಟಿಪ್ಪುವಿನ ಆಡಳಿತದ ಸಂದರ್ಭದಲ್ಲಿ ಸಂಭವಿಸಿದ

ಮತಾಂತರದಲ್ಲಿ ಕರ್ನಾಟಕದ ಪಿಂಜಾರರು ಸೇರಿರಬಹುದಾದ್ದರಿಂದ ಅವರ ಪ್ರಾಚೀನತೆ ಎರಡರಿಂದ ಮೂರು ಶತಮಾನಗಳಿಗಿಂತ ಹಿಂದಕ್ಕೆ ಹೋಗುವುದಿಲ್ಲ"[೬] ಎನ್ನುತ್ತಾರೆ.

ಒಂದು ಮತ್ತು ಎರಡನ್ನು ಒಪ್ಪಬಹುದು, ಮೂರನೆಯದು ಸಾಧ್ಯತೆ ಇದೆ. ಆದರೆ ಅವರ ಪ್ರಾಚೀನತೆಯನ್ನು ಇನ್ನೂ ಹಿಂದಕ್ಕೆ ಕೊಂಡೊಯ್ಯುವ ಸಾಧ್ಯತೆ ಇದೆ. ಅದು ಅಲ್ಲಾವುದ್ದೀನ್ ಖಿಲ್ಜಿ ಕಾಲದಲ್ಲಿ ೫೦,೦೦೦ ಗುಲಾಮರಿದ್ದರು. ಇವರನ್ನು "ಉಪಯುಕ್ತ ಸೇವಾ ಮೂಲದವರು". ಈ ಸೇವಾ ಮೂಲದವರಲ್ಲಿ 'ಪಿಂಜಾರರು' ಸಹ ಇರುವ ಸಾಧ್ಯತೆಗಳೇ ಹೆಚ್ಚು. ಹತ್ತಿಯ ದಿಂಬುಗಳ ತಯಾರಿಕೆ, ರತ್ನಗಂಬಳಿಯ ಬಗ್ಗೆ ಕೆಲ ಮಾಹಿತಿಗಳನ್ನು ಅವಲೋಕಿಸಿದಾಗ ದೆಹಲಿ ಸುಲ್ತಾನರ ಕಾಲದಲ್ಲಿ ಈ ಪಿಂಜಾರರು ಇದ್ದಿರಬಹುದು ಎಂದು ಹೇಳಬಹುದಾಗಿದೆ.

**ಪಿಂಜಾರ ಸಮುದಾಯದ ಮೂಲ:**

ಪಿಂಜಾರ ಸಮುದಾಯದ ಮೂಲವನ್ನು ಕುರಿತು ಅಷ್ಟಾಗಿ ಅಧ್ಯಯನ ನಡೆದಿಲ್ಲ. ಇವರ ಸಂಸ್ಕೃತಿಯನ್ನು ಕುರಿತು ಕೆಲವು ಅಧ್ಯಯನಗಳು ನಡೆದಿವೆ.

- ಮೈಸೂರು ಗೆಜೆಟಿಯರ್ ಸಂಪುಟ–೨ರಲ್ಲಿ ಹಯವದನರಾಯರು ಮೂರು ರೀತಿಯಲ್ಲಿ ಇವರ ಮೂಲ ಗುರುತಿಸಿದ್ದಾರೆ.

೧) ಮೊಘಲ್ ಸಾಮ್ರಾಜ್ಯದಲ್ಲಿನ ಕೆಲಸದಿಂದ ತೆಗೆದ ನಂತರ ಕಡಲುಗಳ್ಳತನದ ಬುಡಕಟ್ಟಿಗೆ ಸೇರಿದವರು.

೨) ಪಿಂಜಾರರು ಮೂಲತಃ ಅಫ್ಘನ್, ಮರಾಠ ಮತ್ತು ಜಾಟ್ ಸಮುದಾಯದವರು.

೩) ಹೇಸ್ಟಿಂಗ್ಸ್‌ನ ಕಾಲದಲ್ಲಿ ಇವರು ದಕ್ಷಿಣದಲ್ಲಿ ನೆಲೆಸಿ ಕೃಷಿ ಮತ್ತು ಸರ್ಕಾರದ ಇತರ ಕೆಲಸಗಳಲ್ಲಿ ತೊಡಗಿದವರು.

- ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿರುವ 'ದ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್' ಸಂಪುಟದಲ್ಲಿ ಪಿಂಜಾರರನ್ನು ಹಿಂದೂ ಮತ್ತು ಮುಸಲ್ಮಾನ್ ಧರ್ಮಗಳೆರಡರಲ್ಲೂ ಈ ಸಮುದಾಯವಿದೆ ಎಂಬ ಅಭಿಪ್ರಾಯ ಸಹ ಮೂಡಿಬಂದಿದೆ. ಜೊತೆಗೆ ಮುಸಲ್ಮಾನ ಪಿಂಜಾರರು ಔರಂಗಜೇಬನಿಂದ ಮತಾಂತರ ಹೊಂದಿದವರೆಂಬ ಅಭಿಪ್ರಾಯವೂ ಸಹ ಇದೆ. ಹೀಗೆ ಮುಸ್ಲಿಂ ಸಮುದಾಯದಲ್ಲಿನ ಪಿಂಜಾರರನ್ನು ಬೇರೆ ಬೇರೆ ದೃಷ್ಟಿಕೋನಗಳ ಮೂಲಕ ಅಧ್ಯಯನ ಮಾಡಬೇಕಾಗಿದೆ.

**ವೃತ್ತಿ ಕಸುಬು ಮೂಲ :**

ದೆಹಲಿ ಸುಲ್ತಾನರ ಕಾಲದಲ್ಲಿ ದಿಂಬು ತಯಾರಕರು ಮತ್ತು ಕೃಷಿಗೆ ಸಂಬಂಧಿಸಿದ ಪ್ರಮುಖ ಬೆಳೆ ಹತ್ತಿ ಇವೆರಡನ್ನೂ ಗಮನಿಸಿದಾಗ ಈ ಜಾತಿಯ ಕಸುಬನ್ನು ದೃಷ್ಟಿಯಲ್ಲಿಟ್ಟುಕೊಂಡು ಪಿಂಜಾರರಾಗಿರುವುದು ಸಾಧ್ಯತೆ ಇದೆ.

ವೀರಶೈವರಲ್ಲಿ ಕಂಡುಬರುವ ಹಡಪದ, ಕಮ್ಮಾರ, ಚಮ್ಮಾರ, ಮಡಿವಾಳ ಇತರೆ ಕಾಯಕ ಪರಿಕಲ್ಪನೆಯ ಮೂಲಕ ಜಾತಿಗಳು ಮಾರ್ಪಟ್ಟ ಹಾಗೆಯೇ ಚಪ್ಪರಬಂದ್, ಪಿಂಜಾರ. ದರ್ವೇಶಿ ಜಾತಿಗಳು ವೃತ್ತಿಯ ನೆಲೆಯಿಂದ ಮೂಡಿಬಂದಿರಬೇಕು. ವಂಶಪಾರಂಪರ್ಯವಾಗಿ ಹಾಸಿಗೆ-ದಿಂಬು ಮಾಡುವ ವೃತ್ತಿಯನ್ನು ಅವಲಂಬಿಸಿಕೊಂಡು ಬಂದಿದ್ದಾರೆ.

**ಪುರಾಣ ಮೂಲ ನೆಲೆ:**

ಬಹುತೇಕ ಪಿಂಜಾರರಲ್ಲಿ ತಮ್ಮ ಸಮುದಾಯವನ್ನು ಕುರಿತಂತೆ ತುಂಬ ಸ್ವಾರಸ್ಯಕರವಾದ ನಂಬಿಕೆಯೊಂದಿದೆ. ದೇವರ ಸೃಷ್ಟಿಯಾದ 'ಮಾನವ' ಆದಿಯಲ್ಲಿ ಬೆತ್ತಲಾಗಿದ್ದು, ಕ್ರಮೇಣ 'ಮಾನ'ದ ಅರಿವು ಬಂದಂತೆಲ್ಲ ಮರಗಿಡಗಳ ಎಲೆ, ಸೊಪ್ಪನ್ನು ತನ್ನ ಮರ್ಯಾದೆಯನ್ನು ಮುಚ್ಚಿಕೊಳ್ಳಲಾರಂಭಿಸಿದ. ಹಾಗೆ ಮರಗಿಡಗಳ ಎಲೆಸೊಪ್ಪಿನಲ್ಲಿ ಮಾನ ಮುಚ್ಚಿಕೊಳ್ಳುವಾಗ ಅದರಲ್ಲಿ ದಾರದಂತಿರುವ ನಾರಿನ ಲಕ್ಷಣಗಳನ್ನು ಗುರುತಿಸಿ ಅದನ್ನೇ ಒಟ್ಟೊಟ್ಟಾಗಿ ಬಲೆಯಂತೆ ಹೆಣೆದು ಕಲಾತ್ಮಕವಾಗಿ ಹೊದ್ದುಕೊಂಡವನೇ ಪಿಂಜಾರ. ಇದುವರೆಗೂ ಬೆತ್ತಲಾಗಿರುತ್ತಿದ್ದ ಹಿಂದೂ ಮತ್ತು ಮುಸ್ಲಿಮರು ತಮ್ಮ ಮಾನ ಮುಚ್ಚಿಕೊಳ್ಳುವಾಸೆಯಲ್ಲಿ ಪಿಂಜಾರರನ್ನು ಹೆಚ್ಚು ಆಶ್ರಯಿಸತೊಡಗಿದರು. ಹೀಗೆ ನಾವೇ ಹಿಂದೂ ಮುಸ್ಲಿಮರೆಲ್ಲರಿಗೂ ಉಡು ತೊಡುವುದನ್ನು ಕಲಿಸಿದವರು. ಅದರಲ್ಲಿ ಸುಖವಾಗಿ ಉಂಡು ಮೆತ್ತಗೆ ಮಲಗಿಕೊಳ್ಳಲು ಹಾಸಿಗೆಗಳನ್ನು ಮಾಡಿಕೊಟ್ಟವರು ಎಂದು ಅವರು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ನಾವು ನಿಜಕ್ಕೂ ಪುಣ್ಯದ ಕೆಲಸವನ್ನೇ ಮಾಡುತ್ತಿದ್ದೇವೆಂಬ ಧನ್ಯತಾ ಭಾವನೆ ಅವರಲ್ಲಿದ್ದಂತಿದೆ.

ಪಿಂಜಾರರನ್ನು ಲಡಾಫ್ ಅಥವಾ ನದಾಫ್ ಎಂದು ಕರೆಯುವ ಬಗ್ಗೆ ವಿಚಾರಿಸಿದಾಗ ಸಂಪ್ರದಾಯಸ್ಥ ಮುಸ್ಲಿಂ ಯಜಮಾನರೊಬ್ಬರು ಕುತೂಹಲಕಾರಿಯಾದ ಮತ್ತೊಂದು ಸಂಗತಿಯನ್ನು ಹೇಳಿದರು. ಅರಬ್ ದೇಶದಲ್ಲಿ ಮುಸ್ಲಿಮರ ಯಾತ್ರಾಸ್ಥಳವಾದ 'ಮೆಕ್ಕಾ' ಪಟ್ಟಣಕ್ಕೆ ಹತ್ತಿರದಲ್ಲೇ ನದಾಫ್ ಅನ್ನುವ ಹಳ್ಳಿಯೊಂದಿತ್ತಂತೆ (ಈಗಲೂ ಇದೆಯೆಂದು ಕೆಲವರು ನಂಬುತ್ತಾರೆ) ಅದು ನದಿಯ ದಂಡೆಯಲ್ಲಿದ್ದುದರಿಂದ ಆ ಹೆಸರು

ಬಂತಂತೆ. ಅಲ್ಲಿನ ಜನರೆಲ್ಲ ರೈತರಾಗಿದ್ದರು. ಪಕ್ಕದ ಮೆಕ್ಕಾ ಪಟ್ಟಣದ ಮುಸ್ಲಿಮರು ಈ ನದಾಫ್ ಹಳ್ಳಿಯ ಜನರನ್ನು ನಮಾಜು ಮಾಡಲು ಒತ್ತಾಯಿಸುತ್ತಿದ್ದರಂತೆ. ಕರೆದರೂ ನಮಾಜಿಗೆ ಹೋಗದ ಈ ಜನರನ್ನು ನದಾಫ್ ಎಂದು ತಾತ್ಸಾರದಿಂದ ಕರೆಯತೊಡಗಿದರು. ಕಾಲಾನಂತರ ಮುಸ್ಲಿಮರ ಕಾಟ ತಾಳಲಾರದೆ ಅಲೆಮಾರಿಗಳಾಗಿ ಊರೂರು ಸುತ್ತತೊಡಗಿದರು.

**ರಾಯಚೂರು ಜಿಲ್ಲೆಯ ಸ್ಥಳನಾಮ**

ರಾಯಚೂರು ಜಿಲ್ಲೆಯೂ ಐತಿಹಾಸಿಕವಾಗಿ ತನ್ನದೇ ಆದ ಮಹತ್ವವನ್ನು ಹೊಂದಿದೆ. ಇದಕ್ಕೆ ಸುಮಾರು ಕ್ರಿ.ಪೂ.೨೦೦೦ ವರ್ಷಗಳಷ್ಟು ಐತಿಹಾಸಿಕ ಹಿನ್ನೆಲೆಯುಂಟು. ಹಳೆಯ ಶಿಲಾಯುಗದ ಸಂಸ್ಕೃತಿಯಿಂದ ಪ್ರಾರಂಭವಾಗಿ ರಾಜ್ಯದ ಹೈದ್ರಾಬಾದ್ ನಿಜಾಮರು, ಆದಿಲ್‌ಶಾಹಿ, ಬಹುಮನಿಶಾಹಿ ಇತರೆ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದು ಬರುತ್ತದೆ. ಇದು ದೊರೆಗಳ ನಾಡು ಹಾಗೂ 'ದೋ ಅಬ್' ಎಂಬ ಪ್ರತೀತಿ ಪಡೆದ ಪ್ರದೇಶ. 'ದೋ ಅಬ್' ಎಂದರೆ ಎರಡು ನದಿಗಳ ನಡುವಿನ ಪ್ರದೇಶ. ರಾಯಚೂರು ಜಿಲ್ಲೆಯು ಕರ್ನಾಟಕದ ಈಶಾನ್ಯ ಭಾಗದ ಉತ್ತರದಂಚಿನಲ್ಲಿದೆ. ಇಲ್ಲಿ ಬಂಡೆಗಲ್ಲುಗಳ ಬೃಹತ್ ಪರ್ವತಗಳಿಂದ, ಗಿಡಮರಗಳಿಲ್ಲದ ಬಯಲು ಭೂಮಿಯಿಂದ, ಒಣ ಹವೆಯಿಂದ ಕೂಡಿದೆ. ಭೂಮಿಯು ಕಪ್ಪು ಮಣ್ಣಿನಿಂದ ಕೂಡಿದ ಪ್ರದೇಶವಾಗಿದೆ. ಈ ಜಿಲ್ಲೆಯು ಸಮುದ್ರ ಮಟ್ಟದಿಂದ ಸರಿಸುಮಾರು ೧೩೧೧ ಅಡಿ ಎತ್ತರದಲ್ಲಿದೆ. ಈ ಜಿಲ್ಲೆಗೆ ಉತ್ತರದಲ್ಲಿ ಗುಲ್ಬರ್ಗ, ಪಶ್ಚಿಮದಲ್ಲಿ ಬಿಜಾಪುರ ಹಾಗೂ ಧಾರವಾಡ, ಪೂರ್ವದಲ್ಲಿ ಆಂಧ್ರಪ್ರದೇಶ ಮೆಹಬೂಬ್‌ನಗರ ಜಿಲ್ಲೆ ಹಾಗೂ ದಕ್ಷಿಣದಲ್ಲಿ ಆಂಧ್ರದ ಕರ್ನೂಲು ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಗಳಿಂದ ಆವೃತವಾಗಿದೆ. ಜಿಲ್ಲೆಯ ಉತ್ತರದಲ್ಲಿ ಕೃಷ್ಣಾ ನದಿಯು ದಕ್ಷಿಣದಲ್ಲಿ ತುಂಗಭದ್ರಾ ನದಿಯು ಹರಿಯುತ್ತಿವೆ.

"ಜಿಲ್ಲೆಗೆ ರಾಯಚೂರು ಎಂಬ ಹೆಸರು ನಮಗೆ ಹೊಯ್ಸಳರ ಕಾಲದ ಕೆಲವು ಶಾಸನಗಳಿಂದ ತಿಳಿದು ಬರುತ್ತದೆ. ಬೇಲೂರು ತಾಲೂಕು ೧೧೬೧ರಲ್ಲಿ ಹಾಗೂ ಒಂದನೇ ನರಸಿಂಹನ ಆಳ್ವಿಕೆಗೆ ಸಂಬಂಧಿಸಿದ ಹುಲಿಕೆರೆ ಶಾಸನದಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನ ದೊರೆಯು ಗೆದ್ದುಕೊಂಡ ಸ್ಥಳ "ರಾಚವೂರು" ಸಹ ಒಂದು. 'ರಾಚ' ಇದನ್ನು ರಾಜ ಎಂಬ ಪದದಿಂದ ಆಯ್ದುಕೊಳ್ಳಲಾಗಿದೆ. 'ರಾಚ' ಹಾಗೂ 'ಊರು' ಸೇರಿ "ರಾಚನೂರು" ಎಂಬ ಹೆಸರು ಬಳಕೆಗೆ ಬಂದಿತು. ರಾಚನೂರು ರಾಜನ ಊರು ಎಂಬ ಅರ್ಥವನ್ನು ಪಡೆದುಕೊಂಡಿತು. ೧೩ನೇ ಶತಮಾನದಲ್ಲಿ ರಾಚವೂರು ಅಥವಾ ರಾಚನೂರು ಮೊಟಕುಗೊಂಡು ರಾಚೂರು ಎಂದು ಬಳಕೆಗೆ ಬಂದಿತು."[೭] ರಾಯಚೂರು ಎಂಬ ಸ್ಥಳನಾಮದ ಹಿಂದೆ ಮೇಲಿನ ಅಂಶಗಳು ಒಳಗೊಂಡಿವೆ. ಈ ವಿಷಯವು ಕಾಕತೀಯ ದೊರೆ ಎರಡನೇ

ಪ್ರತಾಪರುದ್ರನ ಕಾಲದ ರಾಯಚೂರು ಕೋಟೆಯ ಮೇಲೆ ಇರುವ ೧೨೯೪ನೇ ಇಸ್ವಿಯ ಶಾಸನದಿಂದ ಸ್ಪಷ್ಟವಾಗಿದೆ. ಇದರಲ್ಲಿ ರಾಚೂರು ಎಂದು ಕರೆಯಲಾಗಿದೆ. ಕೃಷ್ಣ ಹಾಗೂ ತುಂಗಭದ್ರಾ ನದಿಗಳ ನಡುವಿನ ಫಲವತ್ತಾದ ಭೂಪ್ರದೇಶವಾದ ರಾಯಚೂರು ಜಿಲ್ಲೆ ಆದಿಮ ಕಾಲದಿಂದಲೂ ಮಾನವನ ವಾಸಕ್ಕೆ ಒಳಪಟ್ಟಿತ್ತೆಂದು ಲಿಂಗಸ್ಗೂರು ತಾಲೂಕಿನ ಮಸ್ಕಿಯಲ್ಲಿ ಲಭಿಸಿದ ಅಶೋಕನ ಶಾಸನವು 'ದೇವನಾಂಪ್ರಿಯ ಎಂಬ ಪರ್ಯಾಯ ಹೆಸರನ್ನು ಹೊಂದಿದ್ದನೆಂದು ಈ ಶಾಸನವು ವಿಶೇಷ ಮಹತ್ವ ಪಡೆದಿದೆ. ಅಶೋಕನ ರಾಜ್ಯದ ದಕ್ಷಿಣ ಗಡಿಯ ಪ್ರಾಂತ್ಯವಾದ ಸುವರ್ಣಗಿರಿಯು ರಾಯಚೂರು ಜಿಲ್ಲೆಯ ಕನಗಿರಿಯಾಗಿತ್ತೆಂಬ ಊಹೆ ಇದೆ.

ಭಾಷಾ ವಿಜ್ಞಾನದ ಪ್ರಕಾರವಾಗಿ ರಾಜ > ರಾಜ > ರಾಯ ಆಗಿರುವ ಸಾಧ್ಯತೆಯು ಇದೆ.

## ೨.೨. ಪಿಂಜಾರ ಸಮುದಾಯದ ನೆಲೆಗಳು

ಪಿಂಜಾರ ಸಮುದಾಯವು ಬಹುತೇಕವಾಗಿ ಬಯಲು ಪ್ರದೇಶದಲ್ಲಿ ಹೆಚ್ಚು ಕಾಣಸಿಗುತ್ತದೆ. ಯಾಕೆ ಪಿಂಜಾರರು ಹೆಚ್ಚು ಬಯಲು ಪ್ರದೇಶದಲ್ಲಿ ವಾಸಿಸುತ್ತಾರೆ ಎಂಬ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. (ಇವರ ಮೂಲ ಕಸುಬಿಗೆ ಇಲ್ಲಿಯ ಭೂಮಿ ಹಾಸುಹೊಕ್ಕಾಗಿದೆ.) ಬಯಲು ಪ್ರದೇಶಗಳಾದ ಬಿಜಾಪುರ, ಬೀದರ್, ಗುಲ್ಬರ್ಗ, ರಾಯಚೂರು, ಯಾದಗಿರಿ, ಬಳ್ಳಾರಿ, ಕೊಪ್ಪಳ, ಧಾರವಾಡ, ಬೆಳಗಾವಿ, ಚಿತ್ರದುರ್ಗ, ದಾವಣಗೆರೆ, ತುಮಕೂರು, ಮೈಸೂರು, ಮಂಡ್ಯ, ಹಾಸನ, ಬೆಂಗಳೂರು, ಗದಗ, ಹಾವೇರಿಯಲ್ಲಿ ಕೂಡ ಪಿಂಜಾರರು ಇದ್ದಾರೆ. ರಾಯಚೂರು ಮತ್ತು ಇಲ್ಲಿನ ಪಿಂಜಾರ ಸಮುದಾಯವನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ರಾಯಚೂರಿನಲ್ಲಿ ಪಿಂಜಾರರು ವಿವಿಧ ಕಸುಬುಗಳಲ್ಲಿ ತೊಡಗಿಕೊಂಡಿದ್ದಾರೆ. ಇದಕ್ಕೆ ರಾಯಚೂರಿನ ಭೂಮಿ, ಜನಸಂಖ್ಯೆ, ವ್ಯಾಪಾರ, ಕೈಗಾರಿಕೆ, ಮುಂತಾದವುಗಳು ಇವರು ನೆಲೆಗೊಳ್ಳಲು ಕಾರಣವಿರಬಹುದು.

ಕರ್ನಾಟಕದಲ್ಲಿ ಬಹುತೇಕ ಕಡೆ ಈ ಸಮುದಾಯವು ಕಾಣಬರುತ್ತದೆ. ಹಿಂದೂ–ಮುಸ್ಲಿಂ ಎರಡು ಸಂಸ್ಕೃತಿಗಳ ಪ್ರಭಾವ ಪಿಂಜಾರರ ಮೇಲೆ ಆಗಿದೆ. ಹೈದ್ರಾಬಾದ್ ಕರ್ನಾಟಕದಲ್ಲಿ ಮುಸ್ಲಿಂ–ಹಿಂದೂ ಮಿಶ್ರಿತ ಕಸುಬುಗಳನ್ನು ಅನುಸರಿಸುತ್ತಿದ್ದಾರೆ. ಇವರ ಪಾರಂಪರಿಕ ಕಸುಬಾದ ಹತ್ತಿ ಹಿಂಜುವುದನ್ನು, ಹಾಸಿಗೆ, ದಿಂಬನ್ನು ತಯಾರಿಸುವುದರ ಜೊತೆ ಜೊತೆಗೆ ಬೇರೆ ಬೇರೆ ಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಆರ್ಥಿಕ ಮತ್ತು ಸಾಮಾಜಿಕ ಭದ್ರತೆಗಾಗಿ ಹಲವು ಕಸುಬುಗಳನ್ನು ಆಶ್ರಯಿಸಿ ಕರ್ಮ

ಜೀವಿಗಳಾಗಿ ಬದುಕು ನಡೆಸುವವರು ಪಿಂಜಾರರು ಮಾತ್ರ. ಕಷ್ಟ ಸಹಿಷ್ಣುಗಳು ಧರ್ಮ ಜಿಜ್ಞಾಸೆಗೆ ಒಳಗಾಗುವವರಲ್ಲ, ಬದುಕನ್ನು ನಂಬಿಕೊಂಡವರು. ವೃತ್ತಿಯನ್ನು ಅವಲಂಬಿಸುವಿಕೆ ಹೊರತು ನಿವೃತ್ತಿಯನ್ನು ಎಂದು ಬಯಸುವವರಲ್ಲ. ಇಂತಹ ಪಿಂಜಾರರ ನೆಲೆಗಳು ಕರ್ನಾಟಕದ ತುಂಬ ಚದುರಿದೆ. ರಾಯಚೂರಿನ ಈ ಕೆಳಗಿನ ತಾಲೂಕುಗಳಲ್ಲಿ ಸದರಿ ಸಮುದಾಯಗಳು ಕಾಣಬರುತ್ತವೆ.

"ಪಿಂಜಾರ ಎಂಬ ಹೆಸರೇ ಸೂಚಿಸಿದಂತೆ ಪಿಂಜಾರ (ಪಿಂಜು ಪದ ಹಿಂಜುವಿನಿಂದಾದದು) ಹತ್ತಿಗೆ ಸಂಬಂಧಪಟ್ಟ ಕೆಲಸದಲ್ಲಿ ತಮ್ಮನ್ನು ಪೂರ್ಣಪ್ರಮಾಣದಲ್ಲಿ ತೊಡಗಿಸಿಕೊಂಡವರು. ಹತ್ತಿಯನ್ನು ಸ್ವಚ್ಛಗೊಳಿಸಿ ಹಾಸಿಗೆ ದಿಂಬು ತಯಾರಿಸುವ ಪಿಂಜಾರರು ತಮ್ಮ ಮೂಲ ವೃತ್ತಿಗೆ ಅಗತ್ಯವಾಗಿರುವ ಹತ್ತಿಯು ವಿಫುಲವಾಗಿ ಸಿಗುವ ಬಯಲು ಪ್ರದೇಶಗಳಲ್ಲಿ ವಾಸಿಸುತ್ತಾರೆ. ಅಂದರೆ ಕರ್ನಾಟಕದ ಬಯಲುಸೀಮೆಯ ಜಿಲ್ಲೆಗಳಾದ ಬಿಜಾಪುರ, ಬೀದರ್, ಗುಲ್ಬರ್ಗ್, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ಧಾರವಾಡ ಜಿಲ್ಲೆಗಳಲ್ಲಿ ಇವರ ನೆಲೆಗಳು ಪ್ರಧಾನವಾಗಿ ಕಂಡುಬರುತ್ತವೆ"[೮] ಎಂದು ಬಿ.ಸಿ.ದಾದಾಪೀರ್‌ರವರು ದಾಖಲಿಸಿರುವುದನ್ನು ಕಾಣಬಹುದಾಗಿದೆ. ಈ ಎಲ್ಲಾ ಜಿಲ್ಲೆಗಳಲ್ಲಿ 'ಕಪ್ಪುಮಣ್ಣು' ಹೇರಳವಾಗಿ ಹೊಂದಿದ ಜಮೀನು ಇರುವುದು ಹತ್ತಿ ಬೆಳೆಗೆ ಈ ಮಣ್ಣು ಯೋಗ್ಯವಾದದ್ದು. ಹತ್ತಿ ಹಿಂಜುವುದಕ್ಕೆ ಈ ಸಮುದಾಯ ತಮ್ಮನ್ನು ಸಮರ್ಪಿಸಿಕೊಂಡು ಕೂಲಿಯನ್ನು ಮಾಡುವುದು. ಶ್ರೀಮಂತ ಮತ್ತು ಇಚ್ಛಿಸಿದ ಕುಟುಂಬಗಳಿಗೆ ಹಾಸಿಗೆ, ದಿಂಬುಗಳನ್ನು ತಯಾರಿಸಿಕೊಡುವುದು ಮುಖ್ಯ ಕಸುಬಾಗಿ ಕಾಣಬಹುದು. ಈ ಎಲ್ಲ ದೃಷ್ಟಿಕೋನಗಳನ್ನು ಅವಲೋಕಿಸಿದಾಗ ಹತ್ತಿಯಿಂದ ಇಲ್ಲಿ ಪಿಂಜಾರರು ನೆಲೆಗೊಂಡರು. ನಂತರದಲ್ಲಿ ಕಾರ್ಖಾನೆಗಳು ಹತ್ತಿಯನ್ನು ಹಿಂಜುವ ಕೆಲಸ ಮಾಡಿ ಪಿಂಜಾರರ ಬದುಕನ್ನು ಕುಗ್ಗಿಸಿದವು. ಈ ನೆಲೆ(ಸ್ಥಳ)ಗಳಲ್ಲಿ ಪಿಂಜಾರರ ಕಸುಬಿನ ಸಾಂಸ್ಕೃತಿಕ ಅನನ್ಯತೆಯನ್ನು ಶೋಧಿಸಬೇಕಾಗಿದೆ.

ಪಿಂಜಾರ ಸಮುದಾಯವು ಬಡಜನರಿಂದ ಕೂಡಿದ ಶ್ರೀಮಂತ ಸಮುದಾಯವಾಗಿದೆ. ಬಡತನವು ಅವರ ಜೀವನದ ಹಾಸುಹೊಕ್ಕಾಗಿದೆ. ಆರ್ಥಿಕವಾಗಿ ಅಷ್ಟೇನು ಸಬಲರಲ್ಲದ ಸಮುದಾಯವಾಗಿದೆ. ಕೇವಲ ತಮ್ಮ ಮೂಲ ಉದ್ಯೋಗವನ್ನೇ ನೆಚ್ಚಿ ಗಾದಿ, ಹಗ್ಗದ ತಯಾರಿಕೆ, ಇತ್ಯಾದಿ ವ್ಯಾಪಾರ ಮಾಡುತ್ತ ತಮ್ಮ ಸಮಾಜದಲ್ಲಿ ಆರ್ಥಿಕವಾಗಿ ಪ್ರಗತಿ ಹೊಂದಲು ಪ್ರಯತ್ನಿಸುತ್ತಿದ್ದಾರೆ. ಆದರೆ ಕಾಲ ಬದಲಾದಂತೆ ಈ ಸಮುದಾಯವು ಕೂಡ ಬದಲಾಗಿದೆ. ಇತ್ತೀಚಿನ ದಿನಮಾನಗಳಲ್ಲಿ ವಿವಿಧ ವೃತ್ತಿಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಗುತ್ತಿಗೆದಾರರು, ಕಟ್ಟಡ ನಿರ್ಮಾಣಕಾರರು, ವ್ಯಾಪಾರಸ್ಥರು, ಟೈಲರಿಂಗ್ ಹೀಗೆ ಇತ್ಯಾದಿ

ಕೆಲಸ ಕಾರ್ಯಗಳನ್ನು ಕೈಗೊಂಡು ಕರ್ನಾಟಕ ರಾಜ್ಯದಾದ್ಯಂತ ಚದುರಿ ಹೋಗಿದ್ದಾರೆ. ಆದಾಗ್ಯೂ ರಾಯಚೂರನ್ನು ಗಮನಿಸಿದಾಗ ಈ ಜಿಲ್ಲೆಯ ಐದು ತಾಲೂಕುಗಳಲ್ಲಿ ಪಿಂಜಾರ ಸಮುದಾಯದ ನೆಲೆಗಳು ಪ್ರಧಾನವಾಗಿ ಈ ರೀತಿಯಾಗಿ ಗುರುತಿಸಿಕೊಳ್ಳಬಹುದಾಗಿದೆ.

**ಮಾನವಿ ತಾಲೂಕು:**

ಹತ್ತಿಯನ್ನು ಸ್ವಚ್ಛಗೊಳಿಸಿ ಹಾಸಿಗೆ, ದಿಂಬು ತಯಾರಿಸುವ ಪಿಂಜಾರರು ಸಾಮಾಜಿಕ ಸ್ಥಿತಿಗತಿಯು ಅಷ್ಟೇನೂ ಪ್ರಗತಿ ಕಂಡಿಲ್ಲವೆಂದು ಹೇಳಬಹುದು. ಗ್ರಾಮೀಣ ಭಾಗದಲ್ಲಿ ಬದುಕುವ ಈ ಸಮುದಾಯವು ಯಾವ ಕ್ಷೇತ್ರದಲ್ಲಿ ಪ್ರಗತಿ ಹೊಂದದೆ ಬಡತನದ ಬೇಗೆಯಲ್ಲಿ ಸಿಲುಕಿ ಇಂದು ಪರ್ಯಾಯ ಕಸುಬುಗಳನ್ನು ಅವಲಂಬಿಸಿ ಈ ತಾಲೂಕಿನ ಗ್ರಾಮಗಳಾದ ನಿರುಮಾನವಿ, ಸಿರವಾರ, ಮಾನವಿ, ಹಿರೆಕೊಟ್ನೆಕಲ್, ಚಿಕ್ಕೊಟ್ನೆಕಲ್, ಕಲ್ಲೂರು, ಪಾಮನಕಲ್ಲೂರು, ಅಮಿನಗಾಡ, ಕೂರ್ಡಿ, ಕಪಗಲ್, ಪೋತಗಲ್ ಗ್ರಾಮಗಳು ಸೇರಿದಂತೆ ತಾಲೂಕಿನ ಇನ್ನಿತರೆ ಹಲವಾರು ಗ್ರಾಮಗಳಲ್ಲಿ ನೆಲೆಸಿದ್ದಾರೆ.

**ಲಿಂಗಸ್ಗೂರು:**

ಈ ತಾಲೂಕಿನಲ್ಲಿ ಹಟ್ಟಿ ಚಿನ್ನದ ಗಣಿಯು ಸ್ಥಾಪನೆಯಾಗಿದ್ದು, ಪಿಂಜಾರರು ತಮ್ಮ ಮೂಲ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗದೆ, ಆಧುನಿಕ ಕಾರ್ಖಾನೆಗಳಲ್ಲಿ ಕೆಲಸ ಮಾಡುವವರು ಕೆಲವರಾದರೆ, ಇನ್ನೂ ಕೆಲವರು ವ್ಯಾಪಾರ, ಸಣ್ಣ-ಪುಟ್ಟ ಅಂಗಡಿಗಳಲ್ಲಿ ತೊಡಗಿಸಿಕೊಂಡು ಪರ್ಯಾಯ ಕಸುಬುಗಳನ್ನು ಮಾಡುತ್ತ ತಾಲೂಕಿನ ಗ್ರಾಮಗಳಾದ ಮುದಗಲ್, ಮಸ್ಕಿ, ಅಡಿವಿಬಾವಿ, ಹಟ್ಟಿ, ಲಿಂಗಸ್ಗೂರು, ಅನೆಹೊಸುರು, ಈಚನಾಳ ಇನ್ನಿತರೆ ಗ್ರಾಮಗಳಲ್ಲಿ ನೆಲೆಸಿರುವುದು ಪ್ರಮುಖವಾಗಿ ಕಂಡುಬರುತ್ತದೆ.

**ರಾಯಚೂರು:**

ರಾಯಚೂರು ತಾಲೂಕು ಜಿಲ್ಲೆ ಸ್ಥಳವಾಗಿರುವುದರಿಂದ ಬೇರೆ ತಾಲೂಕುಗಳಿಗಿಂತ ತುಸು ವಿಸ್ತಾರವಾಗಿಯೇ ಇದೆ. ಈ ತಾಲೂಕಿನಲ್ಲಿ ಪಿಂಜಾರರು ತಮ್ಮ ಮೂಲವೃತ್ತಿಯನ್ನು ಸ್ವಲ್ಪಮಟ್ಟಿಗೆ ಮುಂದುವರೆಸಿಕೊಂಡು ಹೋಗುವವರಿದ್ದರೆ, ಇನ್ನೂ ಕೆಲವರು ಹಮಾಲಿ ಕೆಲಸ, ಹಾಲಿನ ಡೈರಿ, ಶೋರೂಮ್‌ಗಳು, ಕಿರಾಣಿ ಅಂಗಡಿಗಳು, ಹೂವಿನ ವ್ಯಾಪಾರ, ಸೇರಿದಂತೆ ಹಲವಾರು ಜನ ಕಾರ್ಖಾನೆಗಳಲ್ಲಿ ಕೆಲಸಕ್ಕೆ ಹೋಗುತ್ತಿದ್ದಾರೆ. ಈ ತಾಲೂಕಿನ ಗ್ರಾಮಗಳಾದ ಕಡ್ಗಂದೊಡ್ಡಿ, ತಲಮಾರಿ, ಇಡಪನೂರು, ಪುಚ್ಚಲದಿನ್ನಿ, ಮಿಡಗಲದಿನ್ನಿ, ಗಿಲ್ಲೆಸ್ಗೂರು, ಗುಂಜಹಳ್ಳಿ, ಯರಗೇರಾ, ಮೀರಾಪುರ ಇನ್ನಿತರೆ ಹಳ್ಳಿಗಳಲ್ಲಿದ್ದು, ಗ್ರಾಮೀಣಮಟ್ಟದಲ್ಲಿ ಕೂಲಿ ಕೆಲಸಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ.

**ಸಿಂಧನೂರು:**

ಈ ತಾಲೂಕು ಬಹುವೈವಿಧ್ಯತೆಯಿಂದ ಕೂಡಿದೆ. ಹಲವಾರು ಮತಧರ್ಮಗಳ ಸಾಂಸ್ಕೃತಿಕ ನೆಲೆಬೀಡಾಗಿದೆ. ಜಾತಿ ವ್ಯವಸ್ಥೆಯ ಅಡಿಯಲ್ಲಿ ಶ್ರೇಣೀಕೃತಗೊಂಡು ಸಾಮಾಜಿಕ ವ್ಯವಸ್ಥೆಯ ಅನೇಕ ಸ್ಥಿತ್ಯಂತರವನ್ನು ಕಂಡಿದೆ. ಜೀವನೋಪಾಯಕ್ಕೆ ಹಲವಾರು ಉದ್ಯೋಗಗಳನ್ನು ಕೈಗೊಂಡು ವಿಭಿನ್ನ ಆಚಾರ–ವಿಚಾರ, ಊಟ–ಉಪಚಾರ, ಬಟ್ಟೆ–ಬರೆ ಮುಂತಾದ ಸಾಂಸ್ಕೃತಿಕ ಪರಂಪರೆ ಹುಟ್ಟು ಹಾಕಿದರು. ಅಂಥವರಲ್ಲಿ ಪಿಂಜಾರ ಸಮುದಾಯವು ಒಂದು. ತಾಲೂಕಿನ ಗ್ರಾಮಗಳಾದ ಜವಳಿಗೇರಾ, ಹಸಮಕಲ್ಲ್, ಪೊತ್ನಳ್, ಬಳಗನೂರು, ದಿನ್ನಿ ಸೇರಿದಂತೆ ಹಲವಾರು ಗ್ರಾಮಗಳಲ್ಲಿ ನೆಲೆಸಿದ್ದಾರೆ.

**ದೇವದುರ್ಗ:**

ಪಿಂಜಾರ ಸಮುದಾಯವು ನಮ್ಮ ಸಾಮಾಜಿಕ ಜೀವನದಲ್ಲಿ ಒಂದು ಹೊಸ ಪರಂಪರೆಯನ್ನು ಹುಟ್ಟು ಹಾಕಿದೆ. ಅವರ ಜೀವನ ವಿಧಾನ ಧಾರ್ಮಿಕ ಶ್ರದ್ಧೆ, ಆಚಾರ–ವಿಚಾರ, ವೃತ್ತಿ ಕೌಶಲ್ಯ ಇತರ ಸಮುದಾಯದ ಜೊತೆ ಹೊಂದಿಕೊಳ್ಳುವ ಸ್ವಭಾವ ಅತ್ಯಂತ ವಿಸ್ಮಯವಾಗಿದೆ. ಈ ಪಿಂಜಾರರು ಇಂದು ತಮ್ಮ ವೃತ್ತಿಗಳಾದ ಗಾದಿ, ದಿಂಬು ಮಾಡುವುದನ್ನು ಬಿಟ್ಟು ತಾಲೂಕಿನ ಹಲವಾರು ಗ್ರಾಮಗಳಲ್ಲಿ ನೆಲೆಯೂರಿದ್ದಾರೆ. ಅಂದರೆ ಅರಿಕೇರ, ಸಿಂತಲಕುಂಟಾ, ಗಬ್ಬೂರು, ಸುಂಕೇಶ್ವರಾಳು, ಬಂಡಿಮುರು ಸೇರಿದಂತೆ ಹಲವಾರು ಗ್ರಾಮಗಳಲ್ಲಿ ನೆಲೆಸಿದ್ದಾರೆ.

## ಕೊನೆ ಟಿಪ್ಪಣಿಗಳು

೧. ಸದಾಶಿವ ಕೆ, ಸಮಗ್ರ ಭಾರತ ಇತಿಹಾಸ, ಪುಟ – ೧೪೮

೨. ಅದೇ ಪುಟ – ೪೧೪

೩. ಅದೇ ಪುಟ – ೪೧೬

೪. ಜಿ.ಎಚ್. ನಾಯಕ್, ಸಕಾಲಿಕ, ಪುಟ – ೬೦

೫. ದಾದಾಫೀರ್ ಬಿ.ಸಿ., ಕರ್ನಾಟಕದ ಪಿಂಜಾರರು, ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ, ಪುಟ – ೩೧

೬ ದಾದಾಫೀರ್ ಬಿ.ಸಿ, ಪಿಂಜಾರ ಸಂಸ್ಕೃತಿ, ಪುಟ – ೪೩

೭ ಜಗದೀಶ ಕುಮಾರ್. ಬೇಡ ಸಮುದಾಯದ ಮಹಿಳೆ, ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ, ಪುಟ – ೩೯

೮. ದಾದಾಫೀರ್ ಬಿ.ಸಿ., ಕರ್ನಾಟಕದ ಪಿಂಜಾರರು, ಪುಟ – ೨೨

## ಅಧ್ಯಾಯ ಮೂರು

### ೩.೧. ಪಿಂಜಾರ ಸಮುದಾಯದ ಪಾರಂಪರಿಕ ಕಸುಬು

'ಮೆತ್ತನೆಯ ವಸನವಿದ್ದರೆ.....

ನಿದ್ದೆಗೇನು ಕೇಡು?

ವ್ಯಸನ ಇರದ ಬದುಕಿಗೆ

ಹಸನ ಗಾದಿಯಾದರೆ ಸಾಕು.....

ಮುಂಜಾನೆ ಸವಿ ನಿದ್ದೆಯಲಿ

ನೀ ನೆನೆಯಬೇಕು

ಪಿಂಜಾರನ.....'

ಎಂಬುದು ಪೂರ್ವಜರ ಲೋಕ ರೂಢಿಯ ಮಾತು ಈ ಸಂದರ್ಭದಲ್ಲಿ ಗಮನಾರ್ಹವಾದುದು. ಯಾಕೆಂದರೆ 'ಹಸನ ಗಾದಿ' 'ಪಿಂಜಾರ' 'ಸವಿನಿದ್ದೆ' ಪದಗಳು ಆತ್ಮ ಆಂತರ್ಯದಿಂದ ಹಲವಾರು ವಿಚಾರಗಳನ್ನು ಬಿಚ್ಚುತ್ತದೆ. 'ಒಳ್ಳೆಯ ಹಾಸಿಗೆ'ಯನ್ನು ತಯಾರಿಸುವವನು 'ಪಿಂಜಾರ' ಯಾರಿಗೋಸ್ಕರ ಸವಿಯಾದ ನಿದ್ದೆ ಮಾಡಬೇಕೆಂಬ ವರ್ಗಕ್ಕಾಗಿ ತನ್ನ 'ಕಸುಬು' ಎನ್ನುವ ಸೇವೆಯನ್ನು ಮಾಡುತ್ತಾನೆ. ಇದು ಪ್ರಾರಂಭದಲ್ಲಿ ವೃತ್ತಿಯಾಗಿ ಆಸ್ಥಾನ, ಶ್ರೀಮಂತರಿಗೆ, ಮುಂತಾದವರಿಗೆ ಹಾಸಿಗೆ ಬಳಕೆಯಾಗುತ್ತಿತ್ತು. ಇದನ್ನು ರಾಜರಿಗೆ ಸೇವೆಯನ್ನು ಸಲ್ಲಿಸುವ ದೃಷ್ಟಿಯಿಂದ ತಮ್ಮ ಮೂಲ ಕಸುಬನ್ನಾಗಿಯೇ ಸ್ವೀಕರಿಸಿದವರೇ ಈ ಪಿಂಜಾರರು ಎನ್ನುವುದನ್ನು ಸಹ ಸೂಚಿಸುತ್ತದೆ. ಈ ಲೋಕರೂಢಿಯ ಮಾತು ನಿನ್ನೆಯ ಮೊನ್ನೆಯದ್ದಲ್ಲ ಹಿಂದಿನಿಂದಲೂ ಬಂದಿದೆ. ಈ ಕಸುಬನ್ನು ಪಾರಂಪರಿಕವಾಗಿಯೇ ನಡೆಸಿಕೊಂಡು ಬಂದಿದ್ದಾರೆ.

ಮೊಹೆಂಜೊದಾರೋದಲ್ಲಿ ಹತ್ತಿ ಬಟ್ಟೆಯ ಚೂರು ಸಿಕ್ಕಿದೆ. ಆದರೆ ದಿಂಬು, ಗಾದಿಗಳ ಬಗ್ಗೆ ಯಾವ ಅವಶೇಷವೂ ಸಿಕ್ಕಿಲ್ಲ. ಆದ್ದರಿಂದ ಹತ್ತಿಯ ಬಳಕೆ ಇದ್ದ ಕಾರಣ ಹಾಸಿಗೆಯ ಪರಿಕಲ್ಪನೆ ಇದ್ದಿರಲಿಲ್ಲ ಎನಿಸುತ್ತದೆ. ಟರ್ಕನ್ನರ ಆಗಮನವಾದ ಮೇಲೆ ಹಾಸಿಗೆ-ದಿಂಬುಗಳ

ಪರಿಚಯವಾಗಿರಬೇಕು. ದೆಹಲಿ ಸುಲ್ತಾನರು ಇವುಗಳನ್ನು ಬಳಸಿರುವುದಕ್ಕೆ ಕುರುಹು ಸಿಕ್ಕುತ್ತದೆ. ಇಲ್ಲಿಂದಲೇ ಹಾಸಿಗೆ-ದಿಂಬುಗಳನ್ನು ಹತ್ತಿ ಬಳಕೆಯಿಂದ ಮಾಡುತ್ತಿದ್ದಿರಬಹುದು. ಆದರೆ ಇತಿಹಾಸ ಎಲ್ಲಿಯೂ ಸಹ ಇವರ ಉಲ್ಲೇಖಗಳಿಲ್ಲ. ಈ ಸಮುದಾಯದ ಸಾಮಾಜಿಕ ಜೀವನವನ್ನು ದಾಖಲು ಮಾಡಿಲ್ಲ.

ಭಾರತಕ್ಕೆ ಅರಬ್ಬರು, ಟರ್ಕರು, ಫ್ರೆಂಚರು, ಪೋರ್ಚುಗೀಸರು, ಡಚ್ಚರು, ಬ್ರಿಟಿಷರು ಮುಂತಾದವರ ದಾಳಿ ಮತ್ತು ಆಡಳಿತ ನಡೆದಿದೆ. ಇವರ ಐಶಾರಾಮೀ ಜೀವನಕ್ಕೆ ಹಾಸಿಗೆ-ದಿಂಬುಗಳು ಸಹ ಸೇರುತ್ತವೆ. ನಿರ್ದಿಷ್ಟವಾಗಿ ಈ ದೇಶದವರೇ ಹಾಸಿಗೆ-ದಿಂಬುಗಳನ್ನು ಭಾರತಕ್ಕೆ ಪರಿಚಯಿಸಿರಬೇಕು ಎಂದು ಹೇಳಲು ಸಾಧ್ಯವಿಲ್ಲ. ಇನ್ನೊಂದು ಊಹೆ ಪ್ರಕಾರ ಇಂಗ್ಲೆಂಡ್ ಹತ್ತಿಯಿಂದ ಸಿದ್ಧ ಉಡುಪುಗಳನ್ನು ತಯಾರಿಸಿ ಭಾರತಕ್ಕೆ ಮಾರಾಟ ಮಾಡುತ್ತಿತ್ತು. ಭಾರತದಲ್ಲಿ ಹತ್ತಿ ಕಚ್ಚಾ ವಸ್ತುವಾಗಿತ್ತು. ಎರಡು ದೇಶಗಳ ಈ ಸ್ವಾಮ್ಯವನ್ನು ಗಮನಿಸಿದಾಗ ಬ್ರಿಟಿಷರು ಇಲ್ಲವೇ ಭಾರತೀಯ ಹಾಸಿಗೆ-ದಿಂಬುಗಳನ್ನು ಪರಿಚಯಿಸಿರಬೇಕು. ಗುಡಿ ಕೈಗಾರಿಕೆಯಾಗಿ ಭಾರತೀಯರು ಈ ವೃತ್ತಿಯನ್ನು ಅನುಸರಿಸಿರುವುದು ಕೂಡ ಕಂಡುಬರುತ್ತದೆ.

ಒಟ್ಟಿನಲ್ಲಿ ಹಾಸಿಗೆ-ದಿಂಬುಗಳ ಪಾರಂಪರಿಕ ನೋಟವಾಗಲಿ, ಪಿಂಜಾರರ ವೃತ್ತಿಯ ಪಾರಂಪರಿಕ ಜೀವನವನ್ನಾಗಲಿ ನಿರ್ದಿಷ್ಟವಾಗಿ ಎಂದಿನಿಂದ ಶುರುಮಾಡಿದ್ದಾರೆ ಎಂದು ಊಹಿಸಲು ಸಾಧ್ಯವಿದೆಯೇ ಹೊರತು, ಖಚಿತವಾಗಿ ಹೇಳಲು ಸಾಧ್ಯವಿಲ್ಲ. ರಾಯಚೂರು ಜಿಲ್ಲೆಯಲ್ಲಿ ಈ ಕಸುಬಿನ ಜನ ಹೆಚ್ಚಾಗಿ ಸಿಗುತ್ತಾರೆ. ವಿಜಯನಗರ ಸಾಮ್ರಾಜ್ಯಕ್ಕೆ ಹತ್ತಿರವಾದುದು ಮತ್ತು ಬಹುಮನಿ, ಆದಿಲ್‌ಶಾಹಿ ಮನೆತನಗಳು ಇದರ ಸುತ್ತಮುತ್ತಲು ಇದ್ದದ್ದು. ರಾಯಚೂರಿನ ಈ ಬಯಲುನಾಡಿನ ಜನರಿಗೆ ಅಗತ್ಯ ವಸ್ತುಗಳ ಪೂರೈಕೆಗಳಲ್ಲಿ ಹಾಸಿಗೆ-ದಿಂಬುಗಳನ್ನು ತಯಾರಿಸುವುದು ಒಂದಾಗಿತ್ತು.

*ರಾಯಚೂರು ಜಿಲ್ಲೆಯ ಪಿಂಜಾರ ಸಮುದಾಯದ ಪಾರಂಪರಿಕ ಕಸುಬುಗಳನ್ನು ನಾಲ್ಕು ನೆಲೆಗಳಲ್ಲಿ ಗುರುತಿಸಬಹುದು.

೧) ಪಾರಂಪರಿಕ ಕಸುಬು

೨) ಕೃಷಿ

೩) ಕೃಷಿ ಅವಲಂಬಿತ ಕೂಲಿ

೪) ನಗರ ಪ್ರದೇಶಗಳಲ್ಲಿ ಪಿಂಜಾರರ ವೃತ್ತಿ

## ೧) ಪಿಂಜಾರರ ಪಾರಂಪರಿಕ ಕಸುಬು

ಪಿಂಜಾರರ ಹಲವು ಕಸುಬುಗಳಲ್ಲಿ ಪಾರಂಪರಿಕ ಕಸುಬು ಹಾಸಿಗೆ, ದಿಂಬು ತಯಾರಿಸುವುದು. ಇದೇ ಇವರ ಪ್ರಧಾನ ಉದ್ಯೋಗವು ಹೌದು. ಇದು ಇವರ ಮೂಲ ಕಸುಬು ಸಹ. ರಾಜ್ಯದ ಹಲವು ಭಾಗಗಳಲ್ಲಿ ಹಂಚಿಹೋಗಿರುವ ಬಹುತೇಕ ಪಿಂಜಾರರ ಕಸುಬು ಇದೇ ಅಗಿತ್ತು. ಆದ್ದರಿಂದ ರಾಯಚೂರಿನಲ್ಲಿ ಕಂಡುಬರುವ ಪಿಂಜಾರರ ಬದುಕು ಹಾಸಿಗೆ-ದಿಂಬಿನೊಂದಿಗೆ ಅಂಟಿಕೊಂಡಿದೆ.

ರಾಯಚೂರು ಜಿಲ್ಲೆಯಲ್ಲಿ ಕ್ಷೇತ್ರಕಾರ್ಯಗೊಂಡು ಅನೇಕರನ್ನು ಸಂದರ್ಶಿಸಿದೆ. ಆಗ ಪಿಂಜಾರರು ತಮ್ಮ ಕಸುಬಿನ ಬಗ್ಗೆ ಭಾವನಾತ್ಮಕ ಸಂಬಂಧ ಇಟ್ಟುಕೊಂಡಿರುವುದೇ ಹೆಚ್ಚು. ಒಬ್ಬ ವಕ್ತೃವನ್ನು ವಿಚಾರಿಸಿದಾಗ ಮೂಲದಿಂದಲೂ ನಾವು ಪಿಂಜಾರರು ನಮಗೆ ಹಾಸಿಗೆ, ದಿಂಬು ಮಾಡುವ ಈ ಕಸುಬನ್ನು ಮುಂದುವರೆಸಿಕೊಂಡು ಹೋಗಬೇಕೆಂದು ನಿಲುವು ಇದೆ. ಇದು ಒಬ್ಬರಿಂದ ಮಾತ್ರ ಪಡೆದ ಉತ್ತರವಾದರೂ ಬಹುತೇಕರಲ್ಲಿ ಇದೇ ಅಭಿಪ್ರಾಯವನ್ನು ಕಾಣಬಹುದು.

ರಾಯಚೂರಿನಲ್ಲಿ ಸಹ ಇತರ ಜಿಲ್ಲೆಗಳ ಪಿಂಜಾರರಂತೆ 'ಅಲೆಮಾರಿ'ಗಳಾಗಿದ್ದಾರೆ. ಮೂಲತಃ ವೃತ್ತಿಗಾಗಿ, ಕೆಲಸಕ್ಕಾಗಿ ಊರೂರು ಅಲೆಯುವ ಪ್ರವೃತ್ತಿಯನ್ನು ಈ ಜಿಲ್ಲೆಯಲ್ಲಿ ಕಾಣಲಾಯಿತು. ಹಾಸಿಗೆ, ದಿಂಬು ತಯಾರಿಸುವುದಕ್ಕೆ ಪಿಂಜಾರರು ಹಲವು ಉಪಕರಣಗಳನ್ನು ಬಳಸುತ್ತಾರೆ. ಅವುಗಳು ಬೆಸ್ಕಿ, ಕಮಾನು ಮತ್ತು ಕೊಡತಿ, ದಾರ, ಸೂಜಿ, ದಬ್ಬಳ, ಬಟ್ಟೆ, ಹತ್ತಿ, ಗೋಣಿಚೀಲಗಳು. ಮೊದಮೊದಲು ಹೆಗಲ ಮೇಲೆ ಕಮಾನು, ಕೊಡತಿ, ಹಾಸಿಗೆ ರಚನೆಗೆ ಬೇಕಾದ ಬಟ್ಟೆ, ಹತ್ತಿಯನ್ನು ಹೊತ್ತುಕೊಂಡು ಸುತ್ತಮುತ್ತಲಿನ ಊರುಗಳಲ್ಲಿ ಅಲೆಯುತ್ತಿದ್ದರು. ಹರಿದ, ಹಳೆಯ ಹಾಸಿಗೆಗಳನ್ನು ದುರಸ್ತಿ ಮಾಡಿಕೊಡುವುದು, ಹೊಸ ಹಾಸಿಗೆಗಳನ್ನು ಮಾಡಿಸುವಂತೆ ಜನರಲ್ಲಿ ಪ್ರೇರೇಪಣೆ ಮಾಡುವುದನ್ನು ಕಾಣಬಹುದು. ತೀರ ಆರ್ಥಿಕ ಸಂಕಷ್ಟ ಎದುರಾದಾಗ ಒತ್ತಾಯಪೂರ್ವಕವಾಗಿ ಹಾಸಿಗೆಗಳನ್ನು ಉಳ್ಳವರಿಗೆ ಮಾಡಿಕೊಟ್ಟು ಹಣವನ್ನು ಪಡೆಯುತ್ತಿದ್ದರು. ಕೆಲ ಬಡಕುಟುಂಬಗಳಲ್ಲಿ ಹಣವಿಲ್ಲದಿದ್ದರೆ ಸಾಲಕ್ಕೆ ಹಾಸಿಗೆ, ದಿಂಬುಗಳನ್ನು ತಯಾರಿಸಿಕೊಡುತ್ತಿದ್ದರು. ನಂತರ ಬಂದಾಗ ಆ ಹಣವನ್ನು ಪಡೆಯುತ್ತಿದ್ದರು.

### ಹಾಸಿಗೆ-ದಿಂಬು ತಯಾರಿಸುವಿಕೆ

ಮೊದಲು ಹತ್ತಿ ಮತ್ತು ಹಾಸಿಗೆ ಬಟ್ಟೆಯನ್ನು ಖರೀದಿ ಮಾಡುತ್ತಾರೆ. ಹತ್ತಿಯನ್ನು ಕಮಾನು ಮತ್ತು ಕೊಡತಿಯಿಂದ, ಹೊಡೆದು ಹತ್ತಿಯನ್ನು ಮೃದು ರೂಪಕ್ಕೆ ತರಲಾಗುತ್ತದೆ. ಆದರೆ ಒಂದು ಹಾಸಿಗೆ ಎಷ್ಟು ಬೇಕೆಂಬುದನ್ನು ಮೊದಲೇ ನಿರ್ಧರಿಸುತ್ತಾರೆ. ಉದಾಹರಣೆಗೆ:

ಗಾದಿಗೆ ೨೦ ಕಿಲೋ ಹತ್ತಿ ಬೇಕು. ಇದರಲ್ಲಿ ಬಾಕ್ಸ್‌ಗಾದಿ ಅಂದರೆ ಸುತ್ತಲೂ ಬಾರ್ಡರ್ ಇರುವ ಗಾದಿಗೆ ೨೫ ಕಿಲೋ ಹತ್ತಿ ಬೇಕು ಎನ್ನುವ ಮಾಹಿತಿ ನೀಡಿದರು. ಬಟ್ಟೆಯ ಮೂರು ದಿಕ್ಕನ್ನು ಹೊಲಿದು ಹತ್ತಿ ತುಂಬಲು ಒಂದು ಕಡೆ ಜಾಗವನ್ನು ಬಿಟ್ಟಿರುತ್ತಾರೆ. ಇಲ್ಲಿಂದಲೆ ಹತ್ತಿಯನ್ನು ತುಂಬುತ್ತಾ ಹೋಗುವುದು. ಸಂಪೂರ್ಣ ಹತ್ತಿ ತುಂಬಿದ ನಂತರ ಅದರ ಬಾಯಿಯನ್ನು ಹೊಲಿದು ಕೋಲಿನಿಂದ ಒಂದು ಕಡೆಯಿಂದ ಮತ್ತೊಂದು ಕಡೆಯವರೆಗೆ ಒಂದೇ ಸಮನಾದ ಏಟುಗಳನ್ನು ಒತ್ತೊತ್ತಾಗಿ ಕೊಡುತ್ತಾರೆ. ಆ ಮೇಲೆ ದಬ್ಬಳ ಮತ್ತು ದಾರದಲ್ಲಿ ಹಾಸಿಗೆಗೆ ಅಲ್ಲಲ್ಲಿ ಹೊಲಿಗೆಗಳನ್ನು ಹಾಕಿ ಗಂಟು ಕಟ್ಟುತ್ತಾರೆ. ಇದೇ ರೀತಿಯಿಂದಲೇ ದಿಂಬನ್ನು ತಯಾರಿಸುತ್ತಾರೆ.

ರಾಯಚೂರಿನ ಸುತ್ತಮುತ್ತಲಿನಲ್ಲಿ ಈ ಪಾರಂಪರಿಕ ಕಸುಬನ್ನು ಈಗ ಬೆರಳಿಣಿಕೆಯಷ್ಟು ಮಂದಿ ಮಾತ್ರ ಹಳ್ಳಿ ಹಳ್ಳಿಗೆ ಹೋಗಿ ತಯಾರಿಸಿಕೊಡುತ್ತಾರೆ. ಬಹುತೇಕ ಮಂದಿ ನಗರ ಪ್ರದೇಶಗಳಲ್ಲಿ ಇದನ್ನು ಒಂದು ಉದ್ದಿಮೆಯಾಗಿ ಪರಿಗಣಿಸಿದ್ದಾರೆ. ಆದರೆ ಈ ಹಿಂದೆ ಊರೂರಿಗೆ ಅಲೆಯುತ್ತಿದ್ದಾಗ ಮರದ ನೆರಳಲ್ಲೋ, ಗುಡಿ, ಶಾಲೆಯ ಕಟ್ಟೆಯಲ್ಲೋ ಉಳಿದುಕೊಂಡು ಊರಿನಲ್ಲಿನ ಹಾಸಿಗೆಗಳನ್ನು ದುರಸ್ತಿ ಮಾಡಿಕೊಡುತ್ತಿದ್ದರು. ಈಗ ಅಪರೂಪಕೆಂಬಂತೆ ಆಟೋಗಳಲ್ಲಿ ಹತ್ತಿ, ಬಟ್ಟೆ ತಂದು ಹಾಸಿಗೆ ದುರಸ್ತಿ ಮಾಡಿಕೊಟ್ಟು ತಮ್ಮ ಮೂಲ ನೆಲೆಗೆ ಅದೇ ದಿನವೇ ಸೇರಿಕೊಳ್ಳುತ್ತಾರೆ.

ಪಾರಂಪರಿಕ ಕಸುಬನ್ನಾಗಿ ಆಚರಿಸುತ್ತಿದ್ದಾಗ ಕಾಳುಕಡ್ಡಿ, ಹಿಟ್ಟು, ಅನ್ನವನ್ನು ಊಟಕ್ಕೆ ಪಡೆಯುತ್ತಿದ್ದರು. ಹಣವಿಲ್ಲದವರು ದವಸದಾನ್ಯಗಳನ್ನು ಹಣದ ಬದಲು ನೀಡುತ್ತಿದ್ದರು. ಈಗ ಈ ಪದ್ಧತಿಯನ್ನು ಪಿಂಜಾರರು ಬಹುತೇಕವಾಗಿ ನಿಲ್ಲಿಸಿದ್ದಾರೆ. ಹಣವನ್ನು ಪಡೆದು ಕೆಲಸವನ್ನು ಮಾಡಿಕೊಡುತ್ತಿದ್ದರು.

ಪಾರಂಪರಿಕ ಕಸುಬನ್ನು ಈಗಲೂ ಅನುಸರಿಸುತ್ತಿರುವ ಮಹಮ್ಮದ್ ಯೂಸುಫ್‌ಸಾಬ್ ಅವರು "ಮಳೆಗಾಲ ಬಂದರಂತೂ ಏಕ್‌ದಂ ಥಂಡಾ ಆಗುತ್ತದಂತೆ. ಮಳೆಗಾಲದಲ್ಲಿ ಯಾರು ನಮ್ಮನ್ನು ತಿರುಗಿ ನೋಡರು. ಒಮ್ಮೊಮ್ಮೆ ಆ ಊರುಗಳಿಗೆ ಹೋಗಲು ಆದ ಖರ್ಚಿನ ಪಗಾರವು ಸಹ ಹೊರಡುವುದಿಲ್ಲ" ಎಂದು ತಮ್ಮ ಈ ಕಸುಬಿನ ಬಗೆಗಿನ ಸಂಕಷ್ಟವನ್ನು ಹೇಳಿಕೊಳ್ಳುತ್ತಾರೆ.

ರಾಯಚೂರು ಜಿಲ್ಲೆಯಲ್ಲಿ ಸುಮಾರು ೨೫ ರಿಂದ ೩೦ ಸಾವಿರ ಜನಸಂಖ್ಯೆ ಹೊಂದಿರುವ ಪಿಂಜಾರರು ತಮ್ಮ ಪಾರಂಪರಿಕ ಕಸುಬನ್ನು ಉಳಿಸಿಕೊಂಡು ಮತ್ತಿತರ ಕಸುಬುಗಳಲ್ಲಿ ತೊಡಗಿಕೊಂಡಿದ್ದಾರೆ. ನಿರಂತರವಾಗಿ ಕಷ್ಟ ಜೀವಿಗಳು ಕರ್ಮಜೀವಿಗಳಾಗಿ ಜೀವನ ಸಾಗಿಸುತ್ತಿದ್ದಾರೆ.

## ೨) ಕೃಷಿ

ಜಮೀನು ಹೊಂದಿದವರು ಜಮೀನೇತರರು ಎಂದು ಸ್ಥೂಲವಾಗಿ ವಿಂಗಡಿಸಿ ಈ ಜಿಲ್ಲೆಯನ್ನು ಸಮೀಕ್ಷೆ ಮಾಡಬಹುದು. ರಾಯಚೂರು ಜಿಲ್ಲೆ ಅಪರೂಪಕ್ಕೆ ಮಳೆ ಕಾಣುವ ಬಯಲು ಸೀಮೆಯಾಗಿದೆ. ಕೆಲವೊಂದು ಭಾಗಗಳಲ್ಲಿ ಮಾತ್ರ ತುಂಗಭದ್ರಾ ಮತ್ತು ಕೃಷ್ಣಾನದಿ ಹರಿಯುತ್ತದೆ. ಹಾಸಿಗೆ-ದಿಂಬು ಮೂಲ ಕಸುಬಾದರೂ ಅದಕ್ಕಿಂತ ಕೃಷಿಯಲ್ಲಿ ಆದಾಯ ಧಕ್ಕಬಹುದೆಂಬ ಆಸೆಯಿಂದ ರೈತಾಪಿ ಜೀವನ ನಡೆಸುವ ಪಿಂಜಾರರು ಇದ್ದಾರೆ. ಇವರು ತಮ್ಮ ಜಮೀನಿನಲ್ಲಿ ಹತ್ತಿ ಬೆಳೆಯನ್ನೇ ಅವಲಂಬಿಸಿದ್ದಾರೆ. ಮೆಣಸಿನಕಾಯಿ ಬೆಳೆಯು ಸಹ ಇಲ್ಲಿನ ಪ್ರದಾನ ಬೆಳೆ. ಪಂಪ್‌ಸೆಟ್ ಹೊಂದಿರುವವರು ಶೇಂಗಾ, ಮುಸುಕಿನಜೋಳ, ತೋಟಗಾರಿಕೆ ಬೆಳೆಗಳನ್ನು ಬೆಳೆಯುತ್ತಾರೆ. ಪಾರಂಪರಿಕವಾಗಿ ಗಮನಿಸಿದಾಗ ಹತ್ತಿಯೇ ಇವರ ಪ್ರಧಾನ ಆರ್ಥಿಕ ಬೆಳೆಯಾಗಿದೆ.

ಅರ್ಧ ಎಕರೆಯಿಂದ ಮೂರು ಎಕರೆಯವರೆಗೆ ಜಮೀನು ಇರುವವರೇ ಹೆಚ್ಚು. ಶ್ರೀಮಂತರೆಂದರೆ ಇವರಲ್ಲಿ ೨೫-೩೦ ಎಕರೆಯವರೆಗೂ ಹೊಂದಿದವರು ಕೆಲವರಿದ್ದಾರೆ. ಇರುವ ಅಲ್ಪಸ್ವಲ್ಪ ಜಮೀನಿನಲ್ಲೇ ಕೃಷಿ ಮಾಡಿಕೊಂಡಿರುವ ರೈತರು ಇದ್ದಾರೆ. ಎತ್ತು, ನೇಗಿಲು, ಕುಂಟೆ, ಕೂರಿಗೆ ಮುಂತಾದ ಕೃಷಿ ಸಂಬಂಧಿತ ವಸ್ತುಗಳನ್ನು ಸಾಮಾನ್ಯವಾಗಿ ಇಟ್ಟುಕೊಂಡಿರುತ್ತಾರೆ. ಕೃಷಿಯನ್ನು ಆಪ್ತವಾಗಿ ಸ್ವೀಕರಿಸಿದ್ದಾರೆ. ರಾಯಚೂರಿನಿಂದ ಸುಮಾರು ೩೦ ಕಿ.ಮೀ. ಅಂತರದಲ್ಲಿರುವ ಎತಿಬಿಚ್ಚಾಲು ಎಂಬ ಗ್ರಾಮವು 'ವೀಳೆದೆಲೆ'ಯನ್ನು ಪಿಂಜಾರರು ಆರ್ಥಿಕ ಬೆಳೆಯಾಗಿಯೇ ಬೆಳೆಯುತ್ತಾರೆ ಅಥವಾ ಗೇಣಿಗೆ ಹತ್ತಿತೋಟವನ್ನು ಖರೀದಿಸಿ, ಅನೇಕ ಪಿಂಜಾರರಿಗೆ ಕೂಲಿ ಕೆಲಸಕ್ಕಾಗಿಯೂ ಪಿಂಜಾರರನ್ನು ಕರೆಸಿಕೊಳ್ಳುತ್ತಾರೆ.

ಜಮೀನೇತರ ಪಿಂಜಾರರು ಕೂಲಿ ಕಾರ್ಮಿಕರಾಗಿ ಕೆಲಸ ನಿರ್ವಹಿಸುತ್ತಾರೆ. ಕೂಲಿ ಆಳುಗಳಾಗಿ ಕೆಲಸಕ್ಕೆ ಹೋಗುವ ಗಂಡು-ಹೆಣ್ಣು ಸಂಜೆಯವರೆಗೂ ಜಮೀನಿನಲ್ಲಿ ದುಡಿಯಬೇಕಾಗಿರುತ್ತದೆ. ಕೂಲಿಯನ್ನೇ ತಮ್ಮ ಉದ್ಯೋಗವಾಗಿಸಿಕೊಂಡಿದ್ದ ಪಿಂಜಾರರು ಆಯಾ ಊರಿನ ತಮ್ಮ ಸಹ ಕೂಲಿಗಾರರನ್ನು ಸೇರಿಸಿಕೊಂಡು ಈಗ ಗುತ್ತಿಗೆ ಕೆಲಸಕ್ಕೆ ಕೈ ಹಾಕುತ್ತಿದ್ದಾರೆ. ಹತ್ತಿಬಿಡಿಸುವ, ನಾಟಿಹಚ್ಚುವ, ಶೇಂಗಾಬಿಡಿಸುವ, ಕಬ್ಬುಕಡಿಯಲು, ಭತ್ತ ಒಕ್ಕಲು ಮಾಡಲು ಮುಂತಾದ ಕೆಲಸಗಳಿಗಾಗಿ ಒಬ್ಬ ಮೇಸ್ತ್ರಿಯನ್ನು ಮಾಡಿಕೊಂಡು ಅವನ ಮೂಲಕ ಕೆಲಸ ಹಿಡಿಯುತ್ತಾರೆ.

ಜುಲೈ-ಆಗಸ್ಟ್ ತಿಂಗಳಲ್ಲಿ ಈ ಸೇವೆಯಲ್ಲಿ ಪಿಂಜಾರರ ಕೂಲಿ ಕಾರ್ಮಿಕರಿಗೆ ಬಲು ಬೇಡಿಕೆ ಇರುತ್ತದೆ. ಬಿತ್ತುವ ಕೆಲಸದಲ್ಲಿ ನೈಪುಣ್ಯತೆ ಹೊಂದಿದವರಾಗಿದ್ದಾರೆ. ಇತರೆ ಸಮುದಾಯ ಬಿತ್ತುವ ಶೈಲಿಯನ್ನೇ ಇವರು ಸಹ ಅನುಸರಿಸುತ್ತಿದ್ದಾರೆ. ಫಸಲನ್ನು

ಕೊಯ್ಯಲು ಕೃಷಿ ಸಂಬಂಧಿತ ಇತರೆ ಕೆಲಸಗಳಿಗೆ ಈ ಭಾಗದಲ್ಲಿ ಬೇಡಿಕೆ ಜನರೆಂದರೆ ಪಿಂಜಾರರು ಮಾತ್ರ. ಜಮೀನು ಇರುವ ಕೃಷಿಕರು, ಜಮೀನೇತರ ಕೃಷಿ ಕಾರ್ಮಿಕರು ಇಬ್ಬರೂ ಸಹ ಕೃಷಿ ಜೀವನದಲ್ಲಿ ತೊಡಗಿಸುವುದು ಇಲ್ಲಿ ಕಂಡುಬರುತ್ತದೆ.

ಸಿಂಧನೂರು ತಾಲೂಕಿನ ಉಡ, ಸಾಲುಗುಂದ, ಹಂಚಿನಾಳ, ಹಾರಪುರ ಈ ಗ್ರಾಮಗಳಲ್ಲಿ ಪಿಂಜಾರ ಸಮುದಾಯ ಕೃಷಿಕರು ಹೆಚ್ಚು ಜಮೀನನ್ನು ಹೊಂದಿದ್ದಾರೆ. ಆರ್ಥಿಕವಾಗಿ ಶ್ರೀಮಂತ ಕುಟುಂಬಗಳಾಗಿಯೂ ಸಹ ಕಾಣಬರುತ್ತದೆ. ಇಲ್ಲಿಯೂ ಸಹ ಬಡ ಕೃಷಿಕರು ಇದ್ದಾರೆ. ಇಲ್ಲಿಗೆ ತುಂಗಭದ್ರಾ ನೀರು ಹರಿಯುವುದರಿಂದ ಇವರ ಅಭಿವೃದ್ಧಿಗೆ ಪೂರಕವಾಗಿದೆ. ಈ ಭಾಗದಲ್ಲಿ ಭತ್ತವನ್ನು ಅತೀ ಹೆಚ್ಚು ಬೆಳೆಯುವ ಮೂಲಕ ಕೃಷಿಯನ್ನೇ ತಮ್ಮ ಕಸುಬನ್ನಾಗಿಸಿಕೊಂಡಿದ್ದಾರೆ.

**ಕೃಷಿ ಅವಲಂಬಿತ ಕಸುಬುಗಳು**

ಪಿಂಜಾರರಿಗೆ ಹೊಟ್ಟೆ ಹೊರೆಯುವುದೇ ಇವರಿಗೆ ನಿತ್ಯದ ಹೋರಾಟವಾಗಿದೆ. ಸಂತೆಯ ದಿನಗಳಲ್ಲಿ ಇವರ ಜೀವನದ ಹೊಯ್ದಾಟವನ್ನು ಇವರ ಮುಖಗಳಲ್ಲಿ ಕಾಣಬಹುದಾಗಿದೆ. ಒಕ್ಕಲಿಗರಿಗೆ ಬೇಕಾದ ಬಾರುಕೋಲು, ಹಗ್ಗ, ಹಂಗಡ, ಮೂಗುದಾರ, ಹಣೆಕಟ್ಟು, ಮಿಣಿ ಮುಂತಾದವನ್ನು ರಸ್ತೆಯ ಬದಿಯಲ್ಲಿ ಕೈಯಲ್ಲಿ ಹಿಡಿದುಕೊಂಡು ನಿಂತಿರುತ್ತಾರೆ. ಹರಕು ಬಟ್ಟೆಯ, ಕುರುಚಲು ಗಡ್ಡದ, ಗುಳಿಬಿದ್ದ ಕಣ್ಣುಗಳನ್ನು ಹೊಂದಿದ ಈ ವ್ಯಕ್ತಿಗಳು ಬದುಕಿನ ಬವಣೆಯನ್ನು ನಡೆಸುತ್ತಿದ್ದಾರೆ. ಆ ದಿನ ಸಂತೆಯ ವ್ಯಾಪಾರದೊಂದಿಗೆ ಬಂದ ಹಣವನ್ನು ಅದೇ ಸಂತೆಯಲ್ಲಿ ತನಗೆ ಬೇಕಾದದ್ದನ್ನು ಕೊಂಡುಕೊಳ್ಳಲು ಅದೇ ಹಣವನ್ನು ಖರ್ಚು ಮಾಡುತ್ತಾರೆ.

ದನಕರುಗಳನ್ನು ಸಾಕಿಕೊಂಡಿರುವ ಪಿಂಜಾರರನ್ನು ಈ ಭಾಗದಲ್ಲಿ ಕಾಣುತ್ತೇವೆ. ಜಮೀನು ಇಲ್ಲದಿದ್ದರೂ ಅವರಿವರನ್ನು ಕಾಡಿಬೇಡಿ ದನಕರುಗಳಿಗೆ ಮೇವನ್ನು ಸಂಪಾದಿಸಿಕೊಂಡು ಬಣವೆ ಮಾಡಿಕೊಳ್ಳುತ್ತಾರೆ. ರೈತಾಪಿ ಬದುಕಿಗೆ ಸಂಬಂಧಿಸಿದ ಕಮ್ಮಾರಿ, ಬಡಗಿ, ಕೆಲಸಗಳನ್ನು ಸಹ ಮಾಡುತ್ತಾರೆ. ರೈತರಿಗೆ ಅಗತ್ಯವಾದ ಕುಡ (ನಾಗರಮುಂಜ), ತಾಳ (ಪಾಸ)ಗಳನ್ನು ಹೆಣೆದು ಕೊಡುವುದು ಮಾಡುತ್ತಾರೆ. ಹಾರೆ, ಗುದ್ದಲಿ, ದರಂತಿ(ಕುಡುಗೋಲು), ಕುರ್ಚಿಗೆ (ಕುರ್ಪಿ), ಸಬ್ಬಲ್(ಹಾರಿ) ಈ ಕೆಲಸವನ್ನು ಪಿಂಜಾರ ಕಮ್ಮಾರಿಕೆಯವರು ಮಾಡುತ್ತಾರೆ.

ಪಿಂಜಾರರು ಬಡಗಿಯ ಕುಂಟೆ, ಮೇಣಿ, ನೊಗ, ಬಂಡಿಗಾಲಿ ಮಾಡಿಕೊಡುತ್ತಾರೆ. ಈಚಲಕಡ್ಡಿಯಿಂದ ಪುಟ್ಟಿ, ತಡಿಕೆ, ಚಾಪೆ, ಜಲ್ಲೆಗಳನ್ನು ತಯಾರಿಸಿ ಮಾರಾಟ ಮಾಡುತ್ತಾರೆ. ಕತ್ತಾಳೆಪಟ್ಟಿ (ದೊವಗಾಳೀಪಟಿ)ಯನ್ನು ಬಳಸಿಕೊಂಡು ನಾರು ಮಾಡುತ್ತಾರೆ. ಈ

ನಾರಿನಿಂದ ಹಗ್ಗ, ಮೀಣೆ, ಬಾರುಕೋಲು ಮುಂತಾದವನ್ನು ಹೆಣೆದು ಮಾರಾಟ ಮಾಡುತ್ತಾರೆ. ಹೀಗೆ ಕೃಷಿಗೆ ಸಂಬಂಧಿಸಿದ ಕಸುಬುಗಳನ್ನು ಸಹ ತಮ್ಮ ಮೂಲ ಕೆಲಸವನ್ನಾಗಿಸಿಕೊಂಡಿದ್ದಾರೆ.

**ನಗರ ಪ್ರದೇಶಗಳಲ್ಲಿ ಪಿಂಜಾರರ ಮೂಲವೃತ್ತಿ**

ಹಳ್ಳಿಗಳಿಂದ ವೃತ್ತಿ, ವ್ಯಾಪಾರ ಹರಸಿ ಹೋದ ಪಿಂಜಾರರು ನಗರಗಳಲ್ಲಿ ವಾಸಿಸತೊಡಗಿದರು. ನಗರಗಳು ಇವರನ್ನು ಕೈಬೀಸಿ ಕರೆದವು. ಹಳ್ಳಿಗಳಲ್ಲಿ ದುಡಿದ ಪಿಂಜಾರರು ಹಣವನ್ನು ತೊಡಗಿಸಿಕೊಂಡು ವ್ಯಾಪಾರ ಸಣ್ಣಪುಟ್ಟ ಉದ್ದಿಮೆಗಳನ್ನು ಸ್ಥಾಪಿಸಿದರು. ನಗರದಲ್ಲಿ ನೆಲೆಗೊಂಡ ಪಿಂಜಾರರು ಸಹಜವಾಗಿ ತಮ್ಮ ಮೂಲ ಕಸುಬನ್ನೇ ಮುಂದುವರೆಸಿದರು. ಸ್ಥಿರವಾದ ಅಂಗಡಿಗಳನ್ನು ಸ್ಥಾಪಿಸಿದವರು ಕೆಲವರು, ಇನ್ನೂ ಕೆಲವರು ಜಿಲ್ಲೆಯಾದ್ಯಂತ ಪ್ರಮುಖ ನಗರ, ತಾಲೂಕುಗಳೊಂದಿಗೆ ಸಂಬಂಧ ಇಟ್ಟುಕೊಂಡು ಗಾದಿಗಳನ್ನು ಮಾರಾಟಕ್ಕಾಗಿ ಸರಬರಾಜು ಮಾಡತೊಡಗಿದರು.

ಗಾದಿಯನ್ನು ತಯಾರಿಸುವುದು ಮುಖ್ಯ ಕಸುಬಾದರೂ ಕೆಲವು ಉಪಕಸುಬುಗಳನ್ನು ಜೀವನ ಅಗತ್ಯಕ್ಕಾಗಿ ಅವಲಂಬನೆ ಮಾಡಿಕೊಂಡಿದ್ದಾರೆ. ರಾಯಚೂರು, ಮಾನವಿ, ಸಿಂಧನೂರು, ಲಿಂಗಸ್ಗೂರು, ದೇವದುರ್ಗ ತಾಲೂಕುಗಳಲ್ಲಿ ಅನೇಕ ಬಗೆಯ ಉಪಕಸುಬುಗಳನ್ನು ಕಾಣುತ್ತೇವೆ. ಸಾಮಾನ್ಯವಾಗಿ ಕರ್ನಾಟಕದ ತುಂಬಾ ಈ ಕಸುಬುಗಳು ಇವೆ. ಇವುಗಳನ್ನು ಈ ಜಿಲ್ಲೆಯಲ್ಲೂ ಕಾಣಬಹುದು. ಗಾರೆಕೆಲಸ, ಟೀಅಂಗಡಿ, ಮಂಡಕ್ಕಿಭಟ್ಟಿ, ಬಾಳೆಹಣ್ಣಿನವ್ಯಾಪಾರ, ಹೂವಿನವ್ಯಾಪಾರ, ಚಿಕನ್, ಮಟನ್‌ವ್ಯಾಪಾರ, ಕೋಳಿಸಾಕಾಣಿಕೆ, ಬಟ್ಟೆಅಂಗಡಿ, ಬೇಕರಿಗಳು, ಹಂಡೇವು, ಕೊಡಪಾನಗಳಿಗೆ ಕಲಾಯುಮಾಡುವುದು, ತರಕಾರಿಮಾರಾಟ, ಗೋಣಿಚೀಲಹೊಲಿಯುವಿಕೆ ಮತ್ತು ಮಾರಾಟ, ಎತ್ತಿನಕೊಂಬು ಎರಿಯುವುದು, ಎತ್ತಿನ ಕಾಲುಗಳಿಗೆ ಲಾಳಹಾಕುವುದು, ಕುದುರೆವ್ಯಾಪಾರ, ಬೀಡಿಕಟ್ಟುವುದು, ಹಮಾಲಿ ಕೆಲಸ, ಸೆಂಟ್ (ಅತ್ತರ್) ಮಾರಾಟ, ಬಟ್ಟೆಹೊಲಿಯುವಿಕೆ, ಡ್ರೈವರ್, ಕ್ಲೀನರ್, ಬಸ್‌ಕಂಡೆಕ್ಟರ್, ಸೋಪಾದುರಸ್ತಿ, ಗುತ್ತಿಗೆಕೆಲಸ, ಸೋಡಾಫ್ಯಾಕ್ಟರಿ, ವಾಚ್, ರೇಡಿಯೋ, ಟಿ.ವಿ.ದುರಸ್ತಿ, ಊದುಬತ್ತಿತಯಾರಿಕೆ, ಇನ್ನಿತರೆ ಹಲವಾರು ಪರ್ಯಾಯ ಕಸುಬುಗಳನ್ನು ಈ ಭಾಗದಲ್ಲಿ ಕಾಣಬಹುದು.

ರಾಯಚೂರು ತಾಲೂಕಿನ ಮೀರಾಪುರ ಗ್ರಾಮದ ಹಿರಿಯರಾದ 'ಇಮಾಮ್‌ಸಾಬ್'ನವರನ್ನು ಸಂದರ್ಶಿಸಿದಾಗ ಇವರು ಹೇಳುವುದು "ನಾನು ಮೊದಲು ಗಾದಿ ಮಾಡಲು ರಾಯಚೂರಿಗೆ ಹೋಗುತ್ತಿದ್ದೆ, ವರ್ಷ ಪೂರ್ತಿ ಕೆಲಸವಿರುತ್ತಿರಲಿಲ್ಲ ಮತ್ತು ಆದಾಯ ಮಿತಿಯಾಗುತ್ತಿತ್ತು. ಅದಕ್ಕಾಗಿ ಈ ಕಸುಬನ್ನು ಬಿಟ್ಟು ಸ್ವಗ್ರಾಮದಿಂದ

ರಾಯಚೂರು ಪಟ್ಟಣದಲ್ಲಿ ಟೀ ಹೋಟೆಲ್ ಇಟ್ಟುಕೊಂಡಿದ್ದೇನೆ. ಗಾದಿ ಕೆಲಸವನ್ನು ಸಹ ಬಿಡುವಾದಾಗ ಮಾಡುತ್ತೇನೆ" ಎನ್ನುತ್ತಾರೆ.

ಹಳ್ಳಿಯಿಂದ ನಗರ ಪ್ರದೇಶಕ್ಕೆ ವಲಸೆ ಬಂದು ಬದುಕನ್ನು ಭಿನ್ನವಾಗಿ ಬದುಕಲು ಅನೇಕ ಪಿಂಜಾರರು ಹವಣಿಸುತ್ತಿದ್ದಾರೆ.

**೩.೨. ಪಾರಂಪರಿಕ ಕಸುಬಿನ ಮುಂದುವರಿಕೆ**

ರಾಯಚೂರು ಜಿಲ್ಲೆಯನ್ನು ಕ್ಷೇತ್ರಕಾರ್ಯ ಮಾಡಿದಾಗ ಹಲವು ವಿಚಾರಗಳು ದೊರೆತವು. ತುಂಬಾ ವೈವಿಧ್ಯಮಯವಾದ ಬಯಲು ಪ್ರದೇಶ. ಈ ಪ್ರದೇಶವನ್ನು ಮೂರು ಭಾಗ ಮಾಡಿದರೆ ಒಳಿತು. (೧) ಕೆಲವು ಭಾಗಗಳಿಗೆ ತುಂಗಭದ್ರಾ ಮತ್ತು ಕೃಷ್ಣಾನದಿ ನೀರಿನ ಯೋಜನೆಗಳು ದೊರೆತಿವೆ, (೨) ಇನ್ನೂ ಕೆಲವು ಭಾಗಗಳಿಗೆ ನೀರಾವರಿಗಾಗಿ ಪಂಪ್‌ಸೆಟ್ ಬಳಸುತ್ತಿದ್ದಾರೆ. (೩) ಇನ್ನೊಂದು ಭಾಗದಲ್ಲಿ ಸಂಪೂರ್ಣ ಮಳೆಯನ್ನೇ ನಂಬಿಕೊಂಡಿದ್ದಾರೆ. ಒಂದು ಮತ್ತು ಎರಡನೆಯ ಭಾಗದ ಜನರು ಸಂಪೂರ್ಣ ಕೃಷಿಯನ್ನೇ ಅವಲಂಬಿಸಿರುತ್ತಾರೆ. ಆದರೆ ಮೂರನೆ ಭಾಗ ಮಾತ್ರ ಕೃಷಿ, ಕುಲಕಸುಬು, ಉಪಕಸುಬುಗಳನ್ನು ಮುನ್ನಡೆಸುತ್ತಿದ್ದಾರೆ. ಈ ಮೂರನೆ ವರ್ಗದಲ್ಲಿಯೇ ಅನೇಕ ವೈವಿಧ್ಯಗಳಿವೆ. ಇದನ್ನೇ ಈ ಭಾಗದಲ್ಲಿ ಸಮೀಕ್ಷೆ, ಸಂದರ್ಶನ ಮೂಲಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

೧. ಕೃಷಿ–ಪಾರಂಪರಿಕ ಕಸುಬು

೨. ಪಾರಂಪರಿಕ ಕಸುಬು–ಕೃಷಿ

೩. ಪಾರಂಪರಿಕ ಕಸುಬು–ಪರ್ಯಾಯ ಕಸುಬು

**೧. ಕೃಷಿ–ಪಾರಂಪರಿಕ ಕಸುಬು**

ಕೃಷಿಯನ್ನು ಮಾಡುತ್ತಿರುವ ಪಿಂಜಾರರು ಜೊತೆಗೆ ಕುಲಕಸುಬನ್ನು ಮಾಡುತ್ತಿದ್ದಾರೆ. ಇವರಿಗೆ ಇರುವ ಒಂದೆರಡು ಎಕರೆ ಜಮೀನಿನಲ್ಲಿ ಕೃಷಿ ಮಾಡುತ್ತಾರೆ. ಮಳೆಯನ್ನು ನಂಬಿ ಕೂತಿರುವವರು ಕಾಣುತ್ತಾರೆ. ಈ ಭಾಗದಲ್ಲಿ ಅಕಾಲಿಕ ಮಳೆಯಾಗಿರುವುದರಿಂದ ಒಮ್ಮೊಮ್ಮೆ ಬಿತ್ತನೆ ಕಾರ್ಯವು ಹಿಂದೆ ಬೀಳುತ್ತದೆ. ನೀರಾವರಿ ವ್ಯವಸ್ಥೆಗಾಗಿ ಕೊಳವೆ ಬಾವಿಗಳನ್ನು ತೋಡಿಸಲು ಇವರು ಆರ್ಥಿಕವಾಗಿ ಸಬಲರಲ್ಲ. ಇವರಲ್ಲಿ 'ಬಹು ದುಡಿಮೆ' ವಿಧಾನಗಳನ್ನು ಅನುಸರಿಸುತ್ತಿದ್ದಾರೆ. ಮಳೆಗಾಲದಲ್ಲಿ ಕೃಷಿ, ಬೇಸಿಗೆ ಕಾಲದಲ್ಲಿ ಮಾತ್ರ ತಮ್ಮ ಪಾರಂಪರಿಕ ಕಸುಬಾದ ಹಾಸಿಗೆ–ದಿಂಬುಗಳನ್ನು ದುರಸ್ತಿ ಮಾಡಿಕೊಡಲು ಹಳ್ಳಿ–ಹಳ್ಳಿಗಳಲ್ಲಿ ಸುತ್ತುತ್ತಾರೆ.

ಕೃಷಿ ಜೀವನದ ಜೊತೆಗೆ ಪಿಂಜಾರರು ತಮ್ಮ ಮೂಲ ಕಸುಬನ್ನೇ ಮುನ್ನಡೆಸಿಕೊಂಡು

ಬರುತ್ತಿದ್ದಾರೆ. ಸುಮಾರು ೫೦ ವರ್ಷಗಳಿಂದಲೂ ಸಿಂಧನೂರು, ಮಾನವಿ, ರಾಯಚೂರು ತಾಲೂಕುಗಳಲ್ಲಿ ಆರ್ಥಿಕ ಸ್ತರವಿನ್ಯಾಸ ಏರುಪೇರಾಗಿದೆ. ೧೯೮೫ಕ್ಕಿಂತಲೂ ಪೂರ್ವದಲ್ಲಿ ಹತ್ತಿ ಪ್ರಮುಖವಾದ ಬೆಳೆ. ಆದರೆ ಈಗ ಭತ್ತ ತನ್ನ ಪ್ರಾಬಲ್ಯವನ್ನು ಸಾಧಿಸಿದೆ. ಬಹುತೇಕ ಕೃಷಿಕರು ಈ ಭಾಗದಲ್ಲಿ ಅಣೆಕಟ್ಟಿನ ನೀರನ್ನು ಬಳಸುತ್ತಿರುವುದು ಈ ಬದಲಾವಣೆಗೆ ಕಾರಣ. ಆದರೆ ನೀರಿನ ವ್ಯವಸ್ಥೆಯೇ ಇಲ್ಲದ ಕೃಷಿಕರು ಈಗಲೂ ಹತ್ತಿ ಬೆಳೆ ನಂಬಿಕೊಂಡಿದ್ದಾರೆ.

ಲಿಂಗಸ್ಗೂರು ತಾಲೂಕಿನ ಗುಂಡುಸಾಗರ ಗ್ರಾಮದ ಮೌಲಾಸಾಬ್‌ರವರು ಕೃಷಿಕರು, ಜೊತೆಗೆ ಹಾಸಿಗೆ-ದಿಂಬುಗಳನ್ನು ಸಹ ತಯಾರಿಸುತ್ತಾರೆ. ಇವರು "ಮಳೆಗಾಲದಲ್ಲಿ ಕೃಷಿ ಕೆಲ್ಸ ಮಾಡಿ ಹೊಟ್ಟೆ ಹೊರೆಯುತ್ತೀವಿ. ಬಂದ ಬೆಳೆಯನ್ನು ಹಸನ ಮಾಡಿಕೊಂಡು ಬಿಡುವಾದ ಮೇಲೆ ನಮ್ಮ ಕಸುಬಾದ ಗಾದಿ-ದಿಂಬು ಮಾರಾಟ ಮಾಡುತ್ತೀವಿ. ಕೆಲವು ಹಳೆ ಗಾದಿಗಳನ್ನು ದುರಸ್ತಿ ಮಾಡಿಕೊಡ್ತಿವಿ. ಮಳೆ ಸರಿಯಾಗಿ ಬರದೇ ಫಸಲು ಕಳಕೊಂಡಾಗ ನಮ್ಮ ಜೀವನಕ್ಕೆ ಆಧಾರವೇ ಈ ನಮ್ಮ ಕಸುಬು" ಎನ್ನುತ್ತಾರೆ. ಬದುಕು ಕಟ್ಟಿಕೊಳ್ಳಲು ಹೆಣಗಾಡುವ ಧಾರುಣ ಚಿತ್ರಗಳು ಕಾಣುತ್ತೇವೆ. ಅವರು ಬದುಕಿಗಾಗಿ ಹಳ್ಳಿ-ಹಳ್ಳಿಗಳಿಗೆ ಸೈಕಲ್ ಮೇಲೆ ಗಾದಿಗಳನ್ನು, ಕೊಡತಿ, ಕಮಾನುಗಳನ್ನು ಹೆಗಲಿಗೇರಿಸಿಕೊಂಡು ಹೋಗುವ ದೃಶ್ಯ ಕಣ್ಣಿಗೆ ರಾಚುತ್ತದೆ. ಹತ್ತಿಯಿಂದ ತಯಾರಿಸುವ ಖಾದಿ ಬಟ್ಟೆಗಳಿಗೆ ಸರ್ಕಾರ ಕೊಡುವ ಮಾನ್ಯತೆ, ಅದೇ ಹತ್ತಿಯಿಂದಲೇ ಮೆತ್ತನೆ, ಆರಾಮದಾಯಕವಾಗಿ ನಿದ್ರಿಸಲು ಕಾರಣಕರ್ತರಾದ ಪಿಂಜಾರರಿಗೆ ಸವಲತ್ತುಗಳು ಇನ್ನೂ ಹೆಚ್ಚಾಗಬೇಕಿದೆ. ಇವರನ್ನು ಆರ್ಥಿಕ ಅಭಿವೃದ್ಧಿಗೆ ಕೊಂಡೊಯ್ಯಲು ಯೋಜನೆಗಳನ್ನು ರೂಪಿಸುವುದು ಅಗತ್ಯವಾಗಿದೆ.

ಮಾನವಿ ತಾಲೂಕು ಕೇಂದ್ರದಲ್ಲಿ ನೆಲೆಸಿರುವ ರಾಜಾಸಾಬ್‌ರವರು ಮೂಲತಃ ಸಂಗಾಪುರದವರು. ಇವರಿಗೆ ಇದ್ದಂತ ಒಂದು ಎಕರೆ ಜಮೀನನ್ನು ಮಾರಾಟ ಮಾಡಿ ಬಂದು ಮಾನವಿಯಲ್ಲಿ ನೆಲೆಸಿದ್ದಾರೆ. ಇವರು "ನಮ್ಮ ಕುಟುಂಬದಲ್ಲಿ ಒಟ್ಟು ೮ ಜನರಿದ್ದೇವೆ. ಕೃಷಿಗೆ ಅಗತ್ಯವಾಗಿ ಬೇಕಾದ ಭೂಮಿ ನಮ್ಮಲ್ಲಿ ಇರಲಿಲ್ಲ. ಬಿಸಿಲಿಗೆ ಮೈಯೊಡ್ಡಿ ದುಡಿದರು ಅನ್ನಕ್ಕೆ ಕೊರತೆ ಬೀಳುತ್ತಿತ್ತು. ಇದ್ದ ಜಮೀನನ್ನು ಮಾರಾಟ ಮಾಡಿ ಅದರಿಂದ ಬಂದ ಹಣದಲ್ಲಿ ಇಲ್ಲಿ ಒಂದು ಅಂಗಡಿಯನ್ನು ತೆರೆದೆ. ಗಾದಿ-ದಿಂಬುಗಳನ್ನು ತಯಾರಿಸಿ ಉಳಿದ ನಮ್ಮ ಕುಟುಂಬ ಸದಸ್ಯರನ್ನು ಮಾರಾಟ ಮಾಡಿ ಬರಲು ಮತ್ತು ಆರ್ಡರ್ ಹಿಡಿಯಲು ಬಿಟ್ಟಿದ್ದೇನೆ. ಮದುವೆ ಸುಗ್ಗಿಯ ಕಾಲದಲ್ಲಿ ವ್ಯಾಪಾರ ಭರ್ಜರಿಯಾಗಿ ನಡೆಯುತ್ತದೆ. ಮಳೆಗಾಲದಲ್ಲಿ ಪೂರಾ ಕಮ್ಮಿ. ಕೃಷಿಯನ್ನು ಅವಲಂಬಿಸಿದ್ದರೆ ಇಷ್ಟು ಹಣ ದಕ್ಕುತ್ತಿರಲಿಲ್ಲ" ಎನ್ನುತ್ತಾರೆ.

ಹೀಗೆ ಗಾದಿ-ದಿಂಬುಗಳನ್ನು ತಯಾರಿಸುವವರ ಬದುಕು ಒಬ್ಬೊಬ್ಬರದು ಭಿನ್ನವಾಗಿದೆ. ಅರಳೆ /ಹತ್ತಿಯಿಂದ ತಯಾರಿಸುವ ಗಾದಿ-ದಿಂಬು ಮುಂತಾದವುಗಳನ್ನು ತಯಾರಿಸುವುದರಲ್ಲೇ ಕೈಲಾಸ ಕಾಣುವ ಪಿಂಜಾರರ ಕೈಗಳಿಗೆ ಇಂದು ಕೆಲಸವಿಲ್ಲದಂತಾಗಿದೆ. ಈಗ ಗಾದಿ-ದಿಂಬು ತಯಾರಿಸುವ ಪಿಂಜಾರರ ಸಂಖ್ಯೆಗಿಂತ ಮೊದಲು ಅಧಿಕ ಸಂಖ್ಯೆ ಇತ್ತು. ಖಾಸಗಿ ಕಂಪನಿಗಳ ಹಾವಳಿಯಿಂದ ರೆಡಿಮೇಡ್ ಗಾದಿ, ದಿಂಬು, ತೆಕ್ಕೆಗಳು ಮಾರುಕಟ್ಟೆಗೆ ಲಗ್ಗೆಯಿಟ್ಟಿವೆ. ಆದ್ದರಿಂದ ಹಳ್ಳಿಯನ್ನು, ಕೃಷಿಯನ್ನು, ಬಿಟ್ಟು ಬಂದ ಪಿಂಜಾರರು ಒಮ್ಮೊಮ್ಮೆ ಅದೇ ಹಳ್ಳಿಗೆ ಹೋಗಿ ವ್ಯಾಪಾರ ಮಾಡುತ್ತಿರುವುದನ್ನು ಸಹ ಕಾಣುತ್ತೇವೆ.

**೨) ಪಾರಂಪರಿಕ ಕಸುಬು-ಕೃಷಿ**

ಪಾರಂಪರಿಕ ಕಸುಬನ್ನು ತಾತ-ಮುತ್ತಾತತನ ಕಾಲದಿಂದಲೂ ಅನುಸರಿಸುತ್ತಾ ಬಂದವರು ಇದ್ದಾರೆ. ಇವರಿಗೆ ಆರ್ಥಿಕವಾಗಿ ಲಾಭ-ನಷ್ಟದ ಯೋಚನೆ ಇಲ್ಲ. ನಂಬಿಕೆ ಸಂಪ್ರದಾಯಬದ್ಧ ಕಸುಬಾಗಿರುವುದರಿಂದ ಇದನ್ನು ಮುಂದುವರೆಸುತ್ತಿದ್ದಾರೆ. ಇನ್ನೂ ಕೆಲವರು ಹಳ್ಳಿ-ಹಳ್ಳಿಗೆ ಪರ್ಯಟನೆ ಮಾಡಿ ತಮ್ಮ 'ಇರುವಿಕೆ'ಯನ್ನು ಸ್ಪಷ್ಟಪಡಿಸುತ್ತಿದ್ದಾರೆ.

ಶ್ರೀಮಂತರು, ಮುಂದುವರೆದ ವರ್ಗಗಳು ಸಂಪ್ರದಾಯಬದ್ಧವಾಗಿ ನಡೆಸಿಕೊಂಡು ಬಂದ ಆಚರಣೆಗಳಿಗೂ ಮತ್ತು ಪಿಂಜಾರರ ಈ ವೃತ್ತಿಗೂ ಒಂದು ನಂಟಿದೆ. ಮದುವೆ, ತೊಟ್ಟಿಲು, ಇನ್ನಿತರ ಆಚರಣೆಗಳ ಸಂದರ್ಭದಲ್ಲಿ ಹೊಸ ಗಾದಿಗಳನ್ನು ಖರೀದಿಸುವುದು ವಾಡಿಕೆ. ಆದ್ದರಿಂದ ಇದನ್ನು ಮಾರುಕಟ್ಟೆಯಿಂದ ಈಗೀಗ ತರುತ್ತಾರೆ. ಮೊದಲೆಲ್ಲ ಪಿಂಜಾರನೆ ಇವನ್ನು ತಂದುಕೊಟ್ಟು ಹೋಗುತ್ತಿದ್ದನು. ಈ ಕಾರಣಗಳಿಂದಲೂ ಸಹ ಇಂದಿಗೂ ಪಿಂಜಾರರು ಗಾದಿ-ದಿಂಬು ತಯಾರಿಸುವ ವೃತ್ತಿಯನ್ನು ಮುಂದುವರೆಸುತ್ತಿರುವುದು ಇಲ್ಲಿ ಕಂಡುಬರುತ್ತದೆ.

ಪಿಂಜಾರರು ಕೆಲವು ಕೃಷಿ ಸಂಬಂಧಿತ ಕಸುಬುಗಳನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಪಿಂಜಾರರು ಗಾದಿ-ದಿಂಬು ತಯಾರಿಕೆ ಕುಲಕಸುಬಾದರೂ ಅದಕ್ಕೆ ಮಾತ್ರ ಅಂಟಿಕೊಂಡು ಬರದೆ ಜೊತೆ ಜೊತೆಗೆ ಇತರ ಕೃಷಿ ಕಾರ್ಮಿಕ ವೃತ್ತಿಯನ್ನು ಮಾಡುತ್ತಾರೆ. ಮಾನವಿ ಮಿನತ್‌ಸಾಬ್, ಚಾನ್‌ಪಾಷ, ಸಿಂಧನೂರಿನ ನಬಿವುದ್ದೀನ್ ಸಾಬ್, ರಾಯಚೂರಿನ ಅಜೀಮ್ ಇವರು ಬಿತ್ತುವ, ನಾಟಿಮಾಡುವ ಕೆಲಸದಲ್ಲಿ ವಿಶೇಷವಾದ ಕೈಚಳಕ ಬಲ್ಲವರು. ರೈತಾಪಿ ಕೆಲಸಗಳಲ್ಲಿ ತೊಡಗಿಕೊಂಡು ಎಲ್ಲ ಬಡ ಭೂರಹಿತ ರೈತರ ಬವಣೆಗಳನ್ನು ಅನುಭವಿಸುತ್ತಿದ್ದಾರೆ. ಈ ಭಾಗದಲ್ಲಿ ಮುಂಗಾರು ಮಳೆ ಬರುವುದನ್ನೇ ಕಾತರದಿಂದ ನಿರೀಕ್ಷಿಸುತ್ತ ಕೆಲಸಗಳನ್ನು ಹುಡುಕುತ್ತಾರೆ.

ಯುಗಾದಿಯ ನಂತರ ಹೊಲಗಳಿಗೆ ಹಿಂದೂ ಸಂಪ್ರದಾಯ ಜಾತಿಗಳು ಹೊನ್ನಾರ ಹೂಡುವ ಹಾಗೆ ಪಿಂಜಾರರು ಸಹ ಬೇಸಾಯ ಹೂಡುತ್ತಾರೆ. ಆದರೆ ಜಮೀನು ಇಲ್ಲದ ಕೆಲಸದಾಳುಗಳು ಈ ಪೂಜೆಯಲ್ಲಿ ಪಾಲ್ಗೊಳ್ಳುತ್ತಾರೆ. ಈ ಮೇಲೆ ಹೆಸರಿಸಿರುವ ಇವರಿಗೆಲ್ಲ ಬಿತ್ತನೆಯಲ್ಲಿ ನೈಪುಣ್ಯತೆ ಹೆಚ್ಚಿರುವುದರಿಂದ ಬಿತ್ತನೆ ಕಾಲದಲ್ಲಿ ಇವರಿಗೆ ಎಲ್ಲಿಲ್ಲದ ಬೇಡಿಕೆ ಇದೆ.

ಹೀಗೆ ಪಾರಂಪರಿಕ ಕಸುಬನ್ನು ಮುಂದುವರೆಸುತ್ತಾ, ಕೃಷಿ ಕಾರ್ಮಿಕರಾಗಿಯೂ ಕಾರ್ಯನಿರ್ವಹಿಸುತ್ತಾರೆ. ಕಮ್ಮಾರಿಕೆ, ಹಗ್ಗ ಹೆಣೆಯುವುದು, ಬಡಗಿ ಕೆಲಸ, ಹಮಾಲಿ, ಕೂಲಿ, ಮುಂತಾದ ವೃತ್ತಿಗಳನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ.

'ಒಂದು ರಾಜ್ಯ ಹಲವು ಜಗತ್ತು' ಎನ್ನುವ ಹಾಗೆ "ಒಬ್ಬ ಪಿಂಜಾರ ಹಲವು ಕಸುಬು" ಎಂದು ಹೇಳಿದರೆ ತಪ್ಪಾಗಲಾರದು.

**೩. ಪಾರಂಪರಿಕ ಕಸುಬು-ಪರ್ಯಾಯ ಕಸುಬು**

ಸಿಂದನೂರು, ರಾಯಚೂರು, ಮಾನವಿ, ಲಿಂಗಸ್ಗೂರುನಲ್ಲಿ ಪಿಂಜಾರರ ಕುಟುಂಬಗಳಿವೆ. ಇವು ನಗರಗಳಲ್ಲಿ 'ಬೆಡ್‌ಸೆಂಟರ್'ಗಳನ್ನು ಸ್ಥಾಪಿಸಿದ್ದಾರೆ. ಈ ತಾಲೂಕು ಕೇಂದ್ರಗಳಲ್ಲಿ ಗಾದಿ-ದಿಂಬುಗಳನ್ನು ತಯಾರಿಸುವುದನ್ನು ಮುಂದುವರೆಸಿದ್ದಾರೆ. ಆದರೆ ವ್ಯಾಪಾರ ವಿಧಾನ ಮಾತ್ರ ಬದಲಾಗಿದೆ.

ಗಾದಿಗಳನ್ನು ಒಮ್ಮೆ ಕೊಂಡವರು, ಮತ್ತೆ ಕೊಳ್ಳಲು ಹಲವು ವರ್ಷಗಳು ಬೇಕಾಗುವುದರಿಂದ ವ್ಯಾಪಾರ ಅಷ್ಟು ಜೋರಾಗಿ ನಡೆಯುವುದಿಲ್ಲ. ಆದರೂ ಇವರು ತಮ್ಮ ವೃತ್ತಿಯನ್ನು ಮುಂದುವರೆಸುತ್ತಿದ್ದಾರೆ. 'ಇಂಡಿಯನ್ ಬೆಡ್‌ಸೆಂಟರ್', ಕರ್ನಾಟಕ ಬೆಡ್ ಸೆಂಟರ್, ಮಾಡರ್ನ್ ಬೆಡ್‌ಸೆಂಟರ್‌ನ್ನು ಭಾರತ್ ಬೆಡ್‌ಸೆಂಟರ್ ಎಂಬ ಹೆಸರಿಟ್ಟುಕೊಂಡು ಸ್ಥಿರ ವ್ಯಾಪಾರ ಮಳಿಗೆಯನ್ನು ಸ್ಥಾಪಿಸಿಕೊಂಡಿದ್ದಾರೆ.

ಆಧುನಿಕತೆಗೆ ಒಳಗಾದವರ ಜನರ ಸ್ಪಂದನೆಗೆ ಮಿಡಿಯಲು ಇದು ಅಗತ್ಯವೂ ಹೌದು. ಆದರೆ ಈ ಕಸುಬನ್ನು ನಂಬಿಕೊಂಡವರು ಕಂಪನಿಗಳಿಂದ ತಯಾರಾಗಿ ಬರುವ ಬೆಡ್ ದಾಳಿಗೆ ಬಲಿಪಶುಗಳಾದರು. ಇಡೀ ಜಿಲ್ಲೆಯನ್ನು ಗಮನಿಸಿದಾಗ ಗಾದಿ-ದಿಂಬುಗಳ ಬೆಡ್‌ಸೆಂಟರ್ ಮಿತ ಪ್ರಮಾಣದಲ್ಲಿದೆ. ಪಿಂಜಾರರಲ್ಲಿ ಕೆಲವರು ಈಗಲೂ ಈ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಮತ್ತೆ ಹಲವರು ಬೇರೆ ವೃತ್ತಿಯನ್ನು ಅನುಸರಿಸುತ್ತಿದ್ದಾರೆ.

ಅಗರಬತ್ತಿಗಳ ತಯಾರಿಕೆ, ಬೀಡಿಕಟ್ಟುವುದು, ಐಸ್‌ಕ್ರೀಂ ಮಾರಾಟ, ಜ್ಯೂಸ್‌ಸೆಂಟರ್, ಟೀ-ಕಾಫಿ ಅಂಗಡಿಗಳನ್ನು ಇಟ್ಟುಕೊಂಡು ವ್ಯಾಪಾರ ಮಾಡುತ್ತಾರೆ. ಇದಕ್ಕೆ ಹಣ ಕಡಿಮೆ ಪ್ರಮಾಣದಲ್ಲಿ ಬೇಕಾಗಿರುವುದರಿಂದ ಬಡ ಪಿಂಜಾರರು ಈ ಕಸುಬುಗಳನ್ನು ಮಾಡುತ್ತಿದ್ದಾರೆ.

## ಅಧ್ಯಾಯ–ನಾಲ್ಕು

### ೪.೧ ಪಾರಂಪರಿಕ ಕಸುಬು ಹಾಗೂ ಆಧುನಿಕ ಮುಖಾಮುಖಿ

ಪಿಂಜಾರರು ತಮ್ಮ ಸಾಂಪ್ರದಾಯಿಕ ಕಸುಬಿನಿಂದ ವಿಮುಖರಾಗುತ್ತಿರುವುದು ನಿಧಾನವಾಗಿಯಾದರೂ ಕಂಡುಬರುತ್ತಿದೆ. ಅದೇ ಕಸುಬನ್ನು ಆಧುನಿಕವಾಗಿ ಸ್ಪರ್ಧಾತ್ಮಕವಾಗಿ ವ್ಯಾವಹಾರಿಕ ಜಗತ್ತಿನೊಂದಿಗೆ ಸೆಣಸಾಡುವವರೂ ಇದ್ದಾರೆ. ಇಂಥವರು ಬ್ಯಾಂಕುಗಳು, ಅಲ್ಪಸಂಖ್ಯಾತರ ನಿಗಮ ಮತ್ತಿತರ ಕಡೆಯಿಂದ ಸಾಲ ಮಾಡಿ ನಗರಗಳಲ್ಲಿ ಬೆಡ್ಡಿಂಗ್ ಶೋರೂಂಗಳನ್ನು ತೆರೆದಿದ್ದಾರೆ. ಇವರಲ್ಲಿ ಕೇವಲ ಹತ್ತಿಯಿಂದ ಮಾಡಿದ ಹಾಸಿಗೆಗಳಲ್ಲದೆ ವುಲನ್, ಬೆಡ್‌ಸೀಟ್, ಮೊದಲಾದ ಕಂಪೆನಿಯ ಆಕರ್ಷಕ ಹಾಸಿಗೆಗಳೂ ದೊರಕುತ್ತವೆ. ನಗರಗಳಲ್ಲಿ ಇತ್ತೀಚೆಗೆ ಹೆಚ್ಚಾಗುತ್ತಿರುವ ಒಳಾವರಣದ ಅಲಂಕಾರಿಕ ವಸ್ತುಗಳಾದ ಕುಷನ್‌ಗಳು, ದಿವಾನ ಸೆಟ್, ಟೇಬಲ್ ಕ್ಲಾತ್, ಫೂಟ್‌ಮ್ಯಾಟ್ರೆಸ್, ಸೊಳ್ಳೆ ಪರದೆಗಳು, ಮುಂತಾದ ವಸ್ತುಗಳನ್ನು ತಯಾರಿಸುವುದರ ಮೂಲಕ ಆಧುನಿಕತೆಗೆ ಮುಖಾಮುಖಿಯಾಗಿದೆ. ನಗರಗಳಲ್ಲಿ ಅಲ್ಲಲ್ಲಿ ವಿರಳವಾಗಿ ಈ ಪರ್ಯಾಯ ಕಸುಬುಗಳಾದ ಬೆಡ್ಡಿಂಗ್ ಮಳಿಗೆಗಳನ್ನು ತೆರೆಯುವವರು ಕೆಲವರಿದ್ದಾರೆ. ಹಳ್ಳಿಗಳಲ್ಲಿ ಸಾಂಪ್ರದಾಯಿಕ ವೃತ್ತಿ ಮುಂದುವರೆಸಿಕೊಂಡು ಹೋಗಲಾಗದ ಕೆಲವರು ನಗರಗಳಿಗೆ ವಲಸೆ ಹೋಗಿ ಜೀವನೋಪಾಯಕ್ಕೆ ನಾನಾ ನಮೂನೆ ಕೆಲಸಗಳನ್ನು ಮಾಡುತ್ತಿದ್ದಾರೆ. ಹಳ್ಳಿಗಳಲ್ಲಿರುವವರು ಸಾಂಪ್ರದಯಿಕ ಬದುಕಿಗೆ ವಿದಾಯ ಹೇಳಿ ಕೃಷಿ ಸಂಬಂಧಿಸಿದ ಕೆಲಸ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ಪಿಂಜಾರರು ಹೀಗೆ ಅವಲಂಬಿಸಿರುವ ಇತರೆ ವೃತ್ತಿಯನ್ನು ಬಿಟ್ಟರೆ ನಂತರದ ಮುಖ್ಯ ಕೆಲಸ ರೈತಾಪಿ ಬದುಕಿಗೆ ಸಂಬಂಧಿಸಿದ್ದು. ಬಯಲು ಸೀಮೆಯ ವ್ಯವಸಾಯದಲ್ಲಿ ಹೆಚ್ಚಾಗಿ ತೊಡಗಿರುವ ಪಿಂಜಾರರು ಅಲ್ಲಲ್ಲಿ ಕೃಷಿಗೆ ಸಂಬಂಧಿಸಿದ ಕೆಲಸಗಳನ್ನು ಮಾಡುತ್ತಾರೆ. ಬಹುಸಂಖ್ಯಾತ ಪಿಂಜಾರರಿಗೆ ಸ್ವಂತ ಜಮೀನಿಲ್ಲ. ಇಂತಹವರೆಲ್ಲ ಜಮೀನ್ದಾರರ ಹೊಲಗದ್ದೆಗಳಲ್ಲಿ ಕೂಲಿ ಕೆಲಸ ಮಾಡುತ್ತಾರೆ.

ಹೀಗೆ ಭಾರತದಲ್ಲಿ ಹಲವಾರು ರೀತಿಯಲ್ಲಿ ಕೈಗಾರಿಕೆಗಳು ಬೆಳೆದಿರುವುದರಿಂದ ಮತ್ತು ಇನ್ನೊಂದೆಡೆ ಆಧುನಿಕತೆಗೆ ಜನರು ಮಾರುಹೋಗುತ್ತಿರುವುದರಿಂದ ಈ ಎರಡರ ಮಧ್ಯೆ ಸಿಲುಕಿರುವ ಪಿಂಜಾರ ಸಮುದಾಯದವರು ಇಂದು ತಮ್ಮ ಮೂಲ ವೃತ್ತಿಯನ್ನು

ಮುಂದುವರಿಸಲು ಸಾಧ್ಯವಾಗದೇ ಕೈಬಿಡುವ ಮಟ್ಟಕ್ಕೆ ತಲುಪಿ ಇತರೇ ಪರ್ಯಾಯ ಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಪಿಂಜಾರರ ಬಗ್ಗೆ ಹೇಳುವುದಾದರೆ ಅಷ್ಟೇನು ಹೇಳಿಕೊಳ್ಳುವಂತಹ ಸ್ಥಿತಿಯಲ್ಲಿ ಅವರು ಇಲ್ಲ. ಇಂದಿನ ದಿನಗಳಲ್ಲಿ ಗಾದಿಗಳನ್ನು ಮಾಡಲು ಮೂಲ ಬಂಡವಾಳವನ್ನು ಹಾಕಲು ಇವರಿಗೆ ಸಾಧ್ಯವಾಗುತ್ತಿಲ್ಲ. ಮುಖ್ಯವಾಗಿ ಇವರಲ್ಲಿ ಶಿಕ್ಷಣದ ಕೊರತೆ ಎದ್ದು ಕಾಣುತ್ತಿದ್ದು, ಅನೇಕರು ಇನ್ನು ಹಳ್ಳಿಗಾಡಿನ ಬಡವರಾಗಿಯೇ ಉಳಿದಿದ್ದಾರೆ. ಹಿಂದಿನ ದಿನಗಳಲ್ಲಿ ಹತ್ತಿಯು ತುಂಬಾ ದುಬಾರಿ ಬೆಲೆಯಲ್ಲಿ ಸಿಗುವುದರಿಂದ ಈ ಹತ್ತಿಯನ್ನು ಕೊಂಡುಕೊಳ್ಳುವ ತಮ್ಮಲ್ಲಿ ಇಟ್ಟುಕೊಂಡು ಗಾದಿಗಳನ್ನು ಮಾಡಲು ಅಸಾಧ್ಯವಾದ ಮಟ್ಟಕ್ಕೆ ತಲುಪಿದ್ದರೆ ಈ ಪಿಂಜಾರ ಸಮುದಾಯದವರಲ್ಲಿ ಕೆಲವರು ಮುಂದುವರೆದವರು ಇದ್ದಾರೆ, ಆದರೆ ಅವರೆಲ್ಲ ಗಾದಿಗಳನ್ನು ಮಾಡಲು ಅಷ್ಟೇನು ಆಸಕ್ತಿ ತೋರಿಸುತ್ತಿಲ್ಲ. ಪಿಂಜಾರ ಸಮುದಾಯದವರಲ್ಲಿಯೇ ಕೆಲವರು ಮುಸ್ಲಿಂ ಸಮುದಾಯ ಎಂದು ಹೇಳಿಕೊಳ್ಳುವವರು ಇದ್ದರೆ ಸ್ವಲ್ಪ ಜನ ಆರ್ಥಿಕವಾಗಿ ಮುಂದುವರೆದ ಜನ ಪಟ್ಟಣಗಳಲ್ಲಿ ಬಂದು ಸೇರಿ ಇಲ್ಲಿಯೇ ನೆಲೆಯೂರಿದ್ದಾರೆ. ಈ ಎಲ್ಲ ಕಾರಣಗಳಿಂದ ತಮ್ಮ ವೃತ್ತಿಯನ್ನು ಮುಂದುವರೆಸಲು ಸಾಧ್ಯವಾಗುತ್ತಿಲ್ಲ.

ಆಧುನಿಕ ಬದುಕಿಗೆ ಸಂಬಂಧಿಸಿದ ನಿಂಬೆಜ್ಯೂಸ್. ಹಾಲಿನಜ್ಯೂಸ್, ಸೇಬಿನಜ್ಯೂಸ್, ಶುಂಠಿಜ್ಯೂಸ್, ಪುದೀನಾಜ್ಯೂಸ್, ಮ್ಯಾಂಗೋಜ್ಯೂಸ್, ಮೋಸಂಬಿಜ್ಯೂಸ್, ಕಿತ್ತಳೆಹಣ್ಣಿನಜ್ಯೂಸ್, ಕರ್ಜೂರಜ್ಯೂಸ್, ಪಪ್ಪಾಯಿಜ್ಯೂಸ್, ಗುಲಾಬಿಐಸಕ್ರಿಂ, ಮ್ಯಾಂಗೋಐಸಕ್ರಿಂ, ಮಾರಾಟವನ್ನು ಋತುಮಾನಕ್ಕೆ ಅನುಗುಣವಾಗಿ ನಡೆಸುವುದು ಕಂಡುಬರುತ್ತದೆ. ಹಾಗೆಯೇ ಗೋಡೆಗಳ ಮೇಲೆ ರಂಗೋಲಿ ಬರೆಯುವುದು, ಹರಿದ ಬಟ್ಟೆಗೆ ಪ್ಯಾಚ್ ಹಾಕುವುದು. ಮೆಹಂದಿ ಡಿಜೈನ್‌ಗಳನ್ನು ತಯಾರಿಸುವುದು, ಬೇಕರಿ ತಿಂಡಿ ತಿನಿಸುಗಳನ್ನು ತಯಾರಿಸುವುದು, ಸೇರಿದಂತೆ ಹಲವಾರು ರೀತಿಯ ಪರ್ಯಾಯ ಕಸುಬುಗಳನ್ನು ರೂಢಿಸಿಕೊಂಡಿದ್ದಾರೆ. ತಮ್ಮ ಮೂಲ ಕಸುಬಾದ ಗಾದಿ ಮಾಡುವುದನ್ನು ಸಂಪೂರ್ಣವಾಗಿ ಮರೆತಿದ್ದಾರೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಬೀಬ ಹುಸೇನ ಎಂಬ ವ್ಯಕ್ತಿಯನ್ನು ಸಂದರ್ಶಿಸಿದಾಗ ನಮ್ಮ ಮೂಲ ಕಸುಬು ಗಾದಿ ಮಾಡುವುದಲ್ಲ ಎಂದು ತಿಳಿಸಿದ್ದಾರೆ. ಆಗ ಈ ವೃತ್ತಿಗೆ ಸಂಬಂಧಿಸಿದಂತೆ ತುಂಬ ಚರ್ಚೆಯಾದ ಮೇಲೆ ಸುಮಾರು ಜನ ಊರಿನ ಹಿರಿಯ ನಾಗರಿಕರು ನಮ್ಮದು ಮೂಲ ಕಸುಬು ಗಾದಿ ಮಾಡುವುದೇ ಆಗಿದೆ ಎಂದಾಗ ಮನವರಿಕೆ ಆಯಿತು. ಹಾಗಾಗಿ ಇಂದು ಎಷ್ಟೋ ಯುವಕರು ಹಳ್ಳಿಗಳಲ್ಲಿ ಈ ಕಸುಬಿಗೆ ಸಂಬಂಧಿಸಿದಂತೆ ಕೇಳಿದರೆ ತಮ್ಮ ಮೂಲದ ಬಗ್ಗೆ ಗೊತ್ತೇ ಇಲ್ಲವೆಂದು ಹೇಳುವುದುಂಟು. ಆಧುನಿಕ ಬದುಕು ಪಾರಂಪರಿಕ ಕಸುಬುನ್ನು ಮೂಲೆಗುಂಪನ್ನಾಗಿಸಿದೆ ಎಂದು ಹೇಳಬಹುದು. ಈ ಆಧುನಿಕತೆ ಪ್ರಭಾವದಿಂದ ಪಿಂಜಾರರ ಜೀವನವೇ ದುಸ್ಥಿತಿಯಲ್ಲಿದೆ.

ಈ ಕಸುಬಿನ ಬಗ್ಗೆ ಅದೆಷ್ಟೋ ಯುವಕರಿಗೆ ಇನ್ನು ಪೂರ್ಣ ಪ್ರಮಾಣದ ಪರಿಚಯವೇ ಇಲ್ಲವಾಗಿದೆ.

ರಾಯಚೂರು ಜಿಲ್ಲೆಯಲ್ಲಿ ತೀರ ಹಿಂದುಳಿದ ಹಳ್ಳಿಗರನ್ನು ಕೇಳಿದರೆ ಕೆಲ ಪಿಂಜಾರರು ಇಂದು ಆಧುನಿಕ ಬದುಕಿಗೆ ಸಿಲುಕಿಕೊಂಡು ಇದ್ದ ಕಸುಬು ನಾಶವಾಗಿ ಹೋಗಿದೆ. ನಮ್ಮ ಬದುಕಂತು ಮುಗಿದುಹೋಗಿದೆ. ಇನ್ನು ಮುಂದೆ ಬರುವ ಪೀಳಿಗೆಯವರು ಏನು ಮಾಡುತ್ತಾರೆ ಗೊತ್ತಿಲ್ಲವೆಂದು ಆತಂಕ ವ್ಯಕ್ತಪಡಿಸುತ್ತಾರೆ. ರಾಯಚೂರು ತಾಲೂಕಿನ ಪೂತಗಲ್ ಎಂಬ ಹಳ್ಳಿಯ ಓರ್ವ ಯುಜಮಾನನಿಗೆ ಕೇಳಿದರೆ ಈಗ ನಾವು ರೈತಾಪಿ ಬದುಕಿಗೆ ಸಂಬಂಧಿಸಿದ ಕಮ್ಮಾರಿಕೆ, ಬಡಗಿತನದಲ್ಲಿ ತೊಡಗಿಸಿಕೊಂಡಿದ್ದೇವೆ ಎಂದು ಮಾಹಿತಿ ನೀಡುತ್ತಾರೆ.

ರೈತರಿಗೆ ಅಗತ್ಯವಾದ ಕುಡ, ತಾಳುಗಳನ್ನು ಹೆಣೆದು ಕೊಡುವುದು, ಗಾರೆ, ಗುದ್ದಲಿ ತಯಾರಿಸುವುದು, ಕುಡಗೋಲಿಗೆ ಹಲ್ಲು ಹಾಕುವುದು, ನೇಗಿಲ ಬಾಳು ಕಿತ್ತುವುದು, ಕುಂಟೆದಿಂಡು, ಮೇಣಿ, ನೋಗ, ಬಂಡಿಯ ಗಾಲಿಗೆ ಹಳಿ ಹಾಕುವುದು, ತಯಾರಿರಿಸುವ ಕೆಲಸದಲ್ಲಿ ತೊಡಗಿಸಿಕೊಂಡಿದ್ದಾರೆ. ಕಚ್ಚಾ ವಸ್ತುಗಳನ್ನು ತರಲು ಮತ್ತು ಅವುಗಳನ್ನು ಮಾರಾಟ ಮಾಡಲು ತುಂಬು ತೊಂದರೆಯನ್ನು ಅನುಭವಿಸುತ್ತಿದ್ದೇವೆ. ಅದಕ್ಕಾಗಿ ಕೈಬಿಡುವ ಸನ್ನಿವೇಶ ಒದಗಿದೆ ಎಂದು ಉತ್ತರಿಸಿದರು. ನಗರದಲ್ಲಿರುವ ಪಿಂಜಾರರು ಹಾಸಿಗೆ ತಯಾರಿಸುವುದರೊಂದಿಗೆ ಇನ್ನೂ ಅನೇಕ ಉಪಕಸುಬುಗಳನ್ನು ಜೀವನೋಪಾಯಕ್ಕಾಗಿ ಅವಲಂಬಿಸಿದ್ದಾರೆ. ಗಾರೆ ಕೆಲಸ, ಮಂಡಕ್ಕಿ ಉರಿಯುವುದು. ಕೊಡಪಾನಗಳಿಗೆ ಕಲಾಯ ಮಾಡುವುದು, ತರಕಾರಿ ಮತ್ತು ಗೋಣಿಚೀಲ ಮಾರಾಟ, ಎತ್ತಿನ ಕೊಂಬು ಎರೆಯುವುದು. ಬೀಡಿ ಕಟ್ಟುವುದು, ಹಮಾಲಿ ಕೆಲಸ ಮುಂತಾದ ನಾನಾ ಕಸುಬುಗಳಲ್ಲಿ ತೊಡಗಿದ್ದಾರೆ. ಹೀಗೆ ನಗರ ಮತ್ತು ಪಟ್ಟಣಗಳಲ್ಲಿ ಆಧುನಿಕ ಬದುಕಿಗೆ ಆಕರ್ಷಕರಾಗಿಯೋ ಹಾಗೂ ತಂತ್ರಜ್ಞಾನಗಳ ಬೆಳವಣಿಗೆಯಿಂದೊಗಿಯೋ ಅವರ ಮೂಲ ವೃತ್ತಿಯನ್ನು ಬಿಡುವ ಪರಿಸ್ಥಿತಿ ಎಂದಾಯಿತು ಎಂದು ಸಂಶೋಧನೆಯ ಸಂದರ್ಭದಲ್ಲಿ ಕಂಡುಬಂದಿದೆ.

ಪಿಂಜಾರ ಸಮುದಾಯದ ಒಬ್ಬ ಪರಿಣಿತ ವ್ಯಕ್ತಿಯ ಜೊತೆಗೆ ಈ ಕಸುಬಿನ ವಿಷಯದ ಬಗ್ಗೆ ಚರ್ಚಿಸಿದಾಗ ನಮ್ಮ ಸಮುದಾಯದವರು ಆಕಸ್ಮಿಕವಾಗಿಯೋ ಅನಿವಾರ್ಯವಾಗಿಯೋ ಪರಿಸ್ಥಿತಿಯ ಒತ್ತಡದಿಂದಾಗಿ ನಾವೂ ನಮ್ಮ ಮೂಲ ಕಸುಬನ್ನು ಇಂದು ಅವಲಂಬಿಸುವ ಸನ್ನಿವೇಶಗಳು ಒದಗಿಬಂದಿಲ್ಲ. ನಮ್ಮ ಹೊಟ್ಟೆಪಾಡಿಗೆ ಏನಾದರು ಕೆಲಸ ಮಾಡಿಯಾದರು ನಾವು ಜೀವಿಸಬೇಕಲ್ಲ. ಅದಕ್ಕಾಗಿ ನಾವು ಇತರೇ ಕಸುಬುಗಳಲ್ಲಿ ತೊಡಗಿಸಿಕೊಂಡಿದ್ದೇವೆ. ಏನು ಕೆಲಸ ಮಾಡದೇ ಹಾಗೆ ನಮ್ಮ ಕಸುಬನ್ನೆ ನಂಬಿ ಕುಳಿತರೆ

ನಮ್ಮ ಜೀವನ ನಡೆಸುವುದು ಹೇಗೆ ಎನ್ನುವುದನ್ನು ತನ್ನ ಅಂತರಾಳದ ಮಾತನ್ನು ಹೊರ ಚೆಲ್ಲಿದ. ಈ ಆಧುನಿಕತೆಯಿಂದ ಕೆಲವರು ಛಿದ್ರವಾಗಿ ಹೋಗಿದ್ದರೆ, ಇನ್ನು ಕೆಲವರು ಆಧುನಿಕತೆಯನ್ನು ಬಳಸಿಕೊಂಡು ಅಭಿವೃದ್ಧಿ ಹೊಂದುವವರಿದ್ದಾರೆ.

ಆಧುನಿಕ ಕೈಗಾರಿಕೆಗಳು ಮುಖ್ಯವಾಗಿ ಭಾರತದ ರೈತಾಪಿ ಜನ ಸಮುದಾಯದಿಂದ ಹಿಡಿದು ಬಡಗಿ, ಕುಂಬಾರ, ಕಮ್ಮಾರ, ಅಕ್ಕಸಾಲಿಗ, ನೇಕಾರ ಮತ್ತು ಪಿಂಜಾರರಂತಹ ಸಮುದಾಯಗಳ ಮೂಲಕ ಕಸುಬಿನ ಮೇಲೆ ಬೇರೆ ಬೇರೆ ರೀತಿಯ ಪರಿಣಾಮಗಳನ್ನು ಬೀರಿವೆ. ಆಧುನಿಕ ಕೈಗಾರಿಕೆಗಳ ಉತ್ಪನ್ನದಿಂದ ರಾಷ್ಟ್ರದ ಆರ್ಥಿಕ ಅಭಿವೃದ್ಧಿ ಸಾಧ್ಯವಾಗಿದೆ ನಿಜ. ಆದರೆ ಇಂಥ ಸಮುದಾಯಗಳ ಆರ್ಥಿಕ ಹಿಂದುಳಿಯುವಿಕೆಗೂ ಇದೆ ಕಾರಣವಾಗಿದೆ. ಮುಖ್ಯವಾಗಿ ಕೈಗಾರಿಕೆಗಳ ಪ್ರಕೃತಿ ಸಂಪತ್ತಿನ ಸಾರ್ಥಕ ಬಳಕೆಯಿಂದ ಜನರ ಅವಶ್ಯಕತೆಗಳನ್ನು ವೇಗವಾಗಿ ಪೂರೈಸುವ ಕೆಲಸ ಮಾಡಿದವು ನಿಜ. ಆದರೆ ಈ ತ್ವರಿತ ಅಭಿವೃದ್ಧಿಯ ಜೊತೆಗೆ ತಮ್ಮ ಮೂಲ ಕಸುಬುಗಳನ್ನೇ ನಂಬಿಕೊಂಡು ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಈ ಜನಸಮುದಾಯಗಳು ದಾರಿ ಕಾಣದೆ ಪರಿತಪಿಸುವಂತಾಗಿದೆ. ಇದು ಈ ಆರ್ಥಿಕ ಹಿಂದುಳಿಯುವಿಕೆಗೆ ಕಾರಣವಾಯಿತು ಎಂದು ಮೇಲುನೋಟಕ್ಕೆ ಅನಿಸಿದರೂ ಅದರಿಂದ ಸಾಂಸ್ಕೃತಿಕವಾಗಿ ಕೂಡ ಒಂದು ಬಗೆಯ ಹಿಂಜರಿತ ಉಂಟಾಯಿತು. ಆಧುನಿಕ ಕೈಗಾರಿಕೆಗಳಿಗೆ ಉತ್ಪಾದನೆ, ವಿನಿಮಯ ವಿತರಣೆಯಂತಹ ವ್ಯವಹಾರಿಕ ಪರಿಭಾಷೆ ಹಾಗೂ ಆ ಮೂಲಕ ಲಾಭ–ನಷ್ಟಗಳೇ ಪ್ರಮುಖವಾಗುತ್ತವೆ. ಆದರೆ ಸಾಂಪ್ರದಾಯಿಕ ವೃತ್ತಿಗಳನ್ನು ಅವಲಂಬಿಸಿ ಬದುಕುವ ಸಮುದಾಯಗಳಿಗೆ ವ್ಯವಹಾರದ ಹೊರತಾಗಿಯೂ ಸಾಂಸ್ಕೃತಿಕ ಅನನ್ಯತೆ ಮುಖ್ಯವಾಗುತ್ತದೆ. ಆದ್ದರಿಂದ ಕೈಗಾರಿಕೀಕರಣ ಬದುಕಿಗೆ ವೇಗವನ್ನು, ಆಕರ್ಷಣೆಯನ್ನು ತಂದಿದ್ದು, ನಿಜವಾದರು ಪಿಂಜಾರರಂಥ ಸಮುದಾಯಗಳ ಆರ್ಥಿಕ ಜೀವನವನ್ನು ಅಸನೀಯವಾಗಿಸಿತು. ಪಿಂಜಾರರು ಕಂಡ ಧಾರ್ಮಿಕ ಸ್ಥಿತ್ಯಂತರಕ್ಕಿಂತ ಈ ಬಗೆಯ ಆರ್ಥಿಕ ಹಿಂಜರಿತ ಅವರ ಬದುಕನ್ನು ಅತಂತ್ರವಾಗಿಸಿದೆ.

ಆಧುನಿಕ ಮುಖಾಮುಖಿಯಿಂದಾಗಿ ಮೊಟ್ಟಮೊದಲಿಗೆ ಪಿಂಜಾರರ ಸಾಂಪ್ರದಾಯಿಕ ವೃತ್ತಿಯ ಸಲಕರಣೆಗಳು ಮೂಲೆ ಸೇರಿದವು, ದೊಡ್ಡ ಹಾಗೂ ಚಿಕ್ಕಪುಟ್ಟ ನಗರಗಳಲ್ಲಿ ಆಧುನಿಕ ಮಾರುಕಟ್ಟೆಗಳು ಜಾರಿಗೆ ಬಂದು ವ್ಯವಹಾರವನ್ನು ಕೇಂದ್ರಿಕರಿಸಿದವು. ಜನರ ಬಳಿಗೆ ಹೋಗಿ ಹಾಸಿಗೆ ದಿಂಬು ತಯಾರಿಸಿಕೊಡುತ್ತಿದ್ದ ಪಿಂಜಾರರು ಆಧುನಿಕ ಮಾರುಕಟ್ಟೆಯಲ್ಲಿ ದೊರಕುವ ಅತ್ಯಾಕರ್ಷಕವಾದ ಹಾಸಿಗೆಯ ಉತ್ಪನ್ನಗಳ ಎದುರು ಪೈಪೋಟಿ ನಡೆಸುವುದು ಅಸಾಧ್ಯವಾಯಿತು. ಬಂಡವಾಳಶಾಹಿಗಳು ಕಾರ್ಖಾನೆಯ ಉತ್ಪನ್ನಗಳನ್ನು ನೇರವಾಗಿ ಖರೀದಿಸಿ ಮಾರುಕಟ್ಟೆಯನ್ನು ನಿರ್ವಹಿಸುತ್ತಿದ್ದರು. ಜನರು ತಮ್ಮ ಅಗತ್ಯಗಳನ್ನು ಹುಡುಕಿಕೊಂಡು ಅನೇಕ ಬಗೆಯ ಮಾದರಿಗಳಲ್ಲಿ ಇಷ್ಟವಾದುದನ್ನು ಆಯ್ಕೆ

ಮಾಡಲಾರಂಭಿಸಿದರು. ಮಾರುಕಟ್ಟೆಯ ಜಾಲ ಅಪಾರ ವೆಚ್ಚದ ಜಾಹೀರಾತುಗಳ ಮೂಲಕ ಗ್ರಾಹಕರನ್ನು ಸೆಳೆಯಿತು. ಜನ ತಮ್ಮ ಮನೆ ಬಾಗಿಲಿಗೆ ಬಂದು ಹತ್ತಿ ಸಂಸ್ಕರಿಸಿ ಹಾಸಿಗೆ ಮಾಡುತ್ತಿದ್ದ ಪಿಂಜಾರನ ಕೆಲಸ, ಅಲ್ಲಿ ಉಂಟಾಗುವ ಧೂಳು-ಇವೆಲ್ಲವುಗಳ ಬದಲಾಗಿ ರೆಡಿಮೇಡ್ ಆಗಿ ದೊರೆಯುವ ವಸ್ತುಗಳಿಗೆ ಹಾತೊರೆಯುವಂತಾಯಿತು. ಪರಿಣಾಮವಾಗಿ ಪಿಂಜಾರರ ದಿನನಿತ್ಯದ ಆದಾಯದಲ್ಲಿ ಗಣನೀಯ ಇಳಿಮುಖವಾಗುತ್ತ ಬಂದಿತು. ಅನಿವಾರ್ಯವಾಗಿ ತಮ್ಮ ಆರ್ಥಿಕ ಹಿಂದುಳಿಯುವಿಕೆಯಿಂದ ಮಾರುಕಟ್ಟೆಯಲ್ಲಿ ಪೈಪೋಟಿ ಮಾಡಲಾಗದೆ ಪಿಂಜಾರರು ಜೀವನೋಪಾಯಕ್ಕಾಗಿ ಇತರೆ ಮಾರ್ಗಗಳನ್ನು ಹುಡುಕಿಕೊಳ್ಳಬೇಕಾಯಿತು. ಹೀಗೆ ತಮ್ಮ ಕಸುಬುಗಳನ್ನು ಆಧುನಿಕತೆಗೆ ಸಿಕ್ಕಿ ನಾಶವಾಗಿ ಆಧುನಿಕತೆಗೆ ವಾಲಿದೆ ಎಂದು ಹೇಳಬಹುದು.

ಪಿಂಜಾರರ ಬದುಕಿನಲ್ಲಿ ಆದ ಮುಖ್ಯ ವ್ಯತ್ಯಾಸವೆಂದರೆ ಅವರು ಮಕ್ಕಳು ಮರಿಗಳನ್ನು ಕಟ್ಟಿಕೊಂಡು ಊರೂರು ಅಲೆಯುವುದು ಕಡಿಮೆಯಾಯಿತು. ಅಲೆಮಾರಿ ಬದುಕು ಬೇರೆ ಬೇರೆ ಭಾಷೆ ಮತ್ತು ಸಾಂಸ್ಕೃತಿಕ ಪರಿಸರಗಳನ್ನು ಪರಿಚಯಿಸುತ್ತಿತ್ತು. ಇದು ಅನೇಕ ಸಲ ಸ್ಥಳೀಯ ಸಂಸ್ಕೃತಿಗಳಲ್ಲಿ ಅನ್ಯಸಂಸ್ಕೃತಿಗಳ ಸಂಯೋಜನೆಗೆ ಕಾರಣವಾಗಿ ಸಾಂಸ್ಕೃತಿಕ ವಿಕಾಸವು ಸಾಮಾಜಿಕ ಸಾಮರಸ್ಯವನ್ನು ಉಂಟುಮಾಡುತ್ತಿದೆ. ಪಿಂಜಾರರು ತಮ್ಮ ಸಾಂಪ್ರದಾಯಿಕ ಕಸುಬು ಮತ್ತು ವಲಸೆಯ ಸ್ವರೂಪದ ಜೀವನದಿಂದ ವ್ಯಾಪಾರ ವಹಿವಾಟಿನ ಜೀವನ ಕ್ರಮಕ್ಕೆ ಕಾಲಿಡುವಂತಾಯಿತು. ಅನೇಕರು ಕೃಷಿ ಕೂಲಿಗೆ ಅಂಟಿಕೊಂಡರು. ಇವತ್ತಿಗೂ ಪಟ್ಟಣಗಳ ಬಸ್‌ಸ್ಟ್ಯಾಂಡ್‌ಗಳಲ್ಲಿ, ಕೃಷಿ ಉತ್ಪನ್ನ ಮಾರುಕಟ್ಟೆಗಳಲ್ಲಿ ಅಮಾಲಿ ಕೆಲಸ ಮಾಡುವ ಅನೇಕ ಪಿಂಜಾರರು ಇಲ್ಲಿಯೂ ತಮ್ಮ ಬಹುಭಾಷಿಕ ಹಾಗೂ ಬಹುಧಾರ್ಮಿಕ ಜೀವನ ವಿಧಾನಗಳಲ್ಲಿ ಕಂಡುಬರುತ್ತಾರೆ.

ಬಡವ ಶ್ರೀಮಂತರೆನ್ನದೆ ನಗರಗಳತ್ತ ವಲಸೆ ಹೊರಟಿರುವ ಗ್ರಾಮೀಣ ಜನಸಮುದಾಯ ಕೇವಲ ಕೆಲಸ ಹುಡುಕಿಕೊಂಡು ಹೋಗುತ್ತಿಲ್ಲ. ಆಳುವ ವ್ಯವಸ್ಥೆ ಯಾವಾಗಲೂ ಶಿಕ್ಷಣ, ಆರೋಗ್ಯ, ವಿದ್ಯುತ್, ನೀರು ಸರಬರಾಜು, ರಸ್ತೆ ಮೊದಲಾದ ವಿಚಾರಗಳಲ್ಲಿ ನಗರಗಳ ಪರವಾಗಿರುತ್ತದೆ. ಆದುದರಿಂದ ಆಧುನಿಕತೆಗೆ ಸಾಧ್ಯವಾದಷ್ಟು ಒಡ್ಡಿಕೊಳ್ಳುವ ಮೂಲಕ ನಾಗರಿಕರಾಗಬೇಕೆಂದು ಬಯಸುತ್ತಾರೆ. ನಗರಗಳಲ್ಲಿರುವವರೆಲ್ಲಾ ನಾಗರಿಕರೇ ಎನ್ನುವ ಪ್ರಶ್ನೆ ಬೇರೆ. ಯಾಕೆಂದರೆ ನಗರಗಳಲ್ಲಿನ ವ್ಯವಹಾರಿಕ, ಸ್ಪರ್ಧೆ ಮತ್ತು ಕೇಂದ್ರೀಕೃತವಾಗುತ್ತಿರುವ ಬಂಡವಾಳದಿಂದಾಗಿ ಮೋಸ, ಕೊಲೆ, ವ್ಯಾಪಕವಾದ ಅನೈತಿಕತೆ, ಧಾರ್ಮಿಕ ಬಡತನಗಳಿವೆ. ಆದರೆ ಪಿಂಜಾರರು ನಗರಗಳಿಗೆ ಹೋಗುವುದು ತಮ್ಮ ಶೈಕ್ಷಣಿಕ, ಸಾಮಾಜಿಕ ಸುಧಾರಣೆಗಳಿಗಲ್ಲ. ಹಣ್ಣು, ಹೂವು ಮಾರಾಟ, ಗುಜರಿ ಅಂಗಡಿ, ಪಾನ್ ಶಾಪಗಳಲ್ಲಿ ಕೆಲಸ, ಆಟೋರಿಕ್ಷಾ ಓಡಿಸುವುದು, ರಸ್ತೆ ಬದಿಯಲ್ಲಿ ಬೀಡಿ ಸಿಗರೇಟ ಅಂಗಡಿ ಇಡುವುದು,

ಗೋಣಿಚೀಲ ಮಾರಾಟ ಹೀಗೆ ಜೀವನ ನಿರ್ವಹಣೆಗೆ ಸಾಧ್ಯವಾದುದೆಲ್ಲವನ್ನು ಅವರು ಮಾಡುತ್ತಾರೆ. ಹಿಂದಿನ ಸಮಾಜದಲ್ಲಿ ಆಧುನಿಕತೆಯಿಂದಾಗಿ ಮೊದಲಾದ ಉಪಕಸುಬುಗಳನ್ನು ಅವಲಂಬಿಸಿದ್ದಾರೆ.

## ೪.೨. ಬೃಹತ್ ಕೈಗಾರಿಕೆಗಳ ಪ್ರಭಾವ

ಕೈಗಾರಿಕೆ ಎಂಬ ಶಬ್ಧಕ್ಕೆ ನಿಘಂಟು ಕೊಡುವ ಸಾಮಾನ್ಯ ಅರ್ಥವೆಂದರೆ 'ಹಸ್ತಕೌಶಲ್ಯದ ಕಾರ್ಯ'. ಅಂದರೆ ತೋಳ್ಬಲ ಅಥವಾ ಬಾಹುಶಕ್ತಿಯಿಂದ ವಸ್ತುಗಳನ್ನು ತಯಾರಿಸುವ ಕಾರ್ಯಕ್ಕೆ 'ಕೈಗಾರಿಕೆ' ಎನ್ನಬಹುದು. ಇದು ಸೀಮಿತವಾದ ಅರ್ಥವನ್ನು ನೀಡುವುದು. ಆದರೆ ವಿಶಾಲಾರ್ಥದಲ್ಲಿ ಹೇಳುವುದಾದರೆ 'ಹಸ್ತಕೌಶಲ್ಯ' ಅಥವಾ ಯಂತ್ರಗಳ ನೆರವಿನಿಂದ ಮೂಲ ವಸ್ತುವಿನ ರೂಪ ಗುಣವನ್ನು ಪರಿವರ್ತಿಸುವುದನ್ನು 'ಕೈಗಾರಿಕೆ' ಎಂದು ಕರೆಯುತ್ತಾರೆ. ಯಂತ್ರಗಳನ್ನು ಉಪಯೋಗಿಸಿಕೊಂಡು ಕಚ್ಚಾ ವಸ್ತುಗಳನ್ನು ಸಿದ್ಧ ವಸ್ತುಗಳನ್ನಾಗಿ ಪರಿವರ್ತಿಸುವ ಪ್ರಕ್ರಿಯೆ ವ್ಯವಸ್ಥೆಯನ್ನು ಕೈಗಾರಿಕೋದ್ಯಮ ಎಂದು ಕರೆಯುವರು.

ಸಾಕಷ್ಟು ಬಂಡವಾಳವನ್ನು (ಅಂದರೆ ಕೋಟಿಗಟ್ಟಲೆ) ಹೂಡಿ, ಆಧುನಿಕ ವಿಧಾನವನ್ನು ಅಳವಡಿಸಿಕೊಂಡು ದೊಡ್ಡ ಗಾತ್ರದಲ್ಲಿ ಉತ್ಪಾದನೆ ಮಾಡುವ ಕೈಗಾರಿಕೆಗಳಿಗೆ ಬೃಹತ್ ಪ್ರಮಾಣದ ಕೈಗಾರಿಕೆಗಳೆನ್ನುತ್ತಾರೆ. ಬೃಹತ್ ಪ್ರಮಾಣದ ಕೈಗಾರಿಕೆಗಳೆಂದರೆ ಕಬ್ಬಿಣ ಮತ್ತು ಉಕ್ಕು ಕೈಗಾರಿಕೆ, ನೌಕಾ ನಿರ್ಮಾಣ, ಭಾರೀ ಇಂಜಿನಿಯರಿಂಗ್, ರಾಸಾಯನಿಕಗಳು, ಯಂತ್ರೋಪಕರಣಗಳು, ರಸಗೊಬ್ಬರಗಳು, ಸಕ್ಕರೆ, ಕೈಗಾರಿಕೆ, ಸಿಮೆಂಟ್ ಕೈಗಾರಿಕೆಗಳು, ವಿಮಾನ, ರೈಲು ಡಬ್ಬಗಳ ನಿರ್ಮಾಣ, ಕಲ್ಲಿದ್ದಲು, ಗಣಿಗಾರಿಕೆ, ಬಟ್ಟೆ ನಿರ್ಮಾಣದ ಕೈಗಾರಿಕೆಗಳು, ಹತ್ತಿ ನಿರ್ಮಾಣದ ಕೈಗಾರಿಕೆಗಳು ಇತ್ಯಾದಿ.

ಕೃಷಿ ಪ್ರಧಾನ ದೇಶವಾದ ಭಾರತದ ಮೇಲೆ ಕೈಗಾರಿಕಾ ಪ್ರಧಾನ ದೇಶವಾದ ಬ್ರಿಟನ್ ಆಳ್ವಿಕೆ ನಡೆಸಲು ಆರಂಭಿಸಿದಾಗ ಸಹಜವಾಗಿಯೇ ಕೆಲವೊಂದು ಬದಲಾವಣೆಗಳು ಉಂಟಾದವು. ಬ್ರಿಟಿಷರು ಭಾರತದಲ್ಲಿ ಕೃಷಿ ಅಥವಾ ಕೈಗಾರಿಕೆಯನ್ನು ಅಭಿವೃದ್ಧಿ ಪಡಿಸಬೇಕೆನ್ನುವ ಉದ್ದೇಶವನ್ನು ಇಟ್ಟುಕೊಂಡು ಬಂದವರಲ್ಲ. ಅವರಿಗಿದ್ದ ಉದ್ದೇಶವೆಂದರೆ ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯವನ್ನು ಕಟ್ಟುವುದು ಹಾಗೂ ವ್ಯಾಪಾರ ಕ್ಷೇತ್ರದಲ್ಲಿ ಲಾಭವನ್ನು ಗಳಿಸುವುದು. ಮತ್ತು ಏಕಸ್ವಾಮ್ಯವನ್ನು ಸ್ಥಾಪಿಸುವುದು. ಈ ಉದ್ದೇಶಗಳಿಗೆ ಪೂರಕವಾದ ಕೃಷಿ ಹಾಗೂ ಕೈಗಾರಿಕಾ ನೀತಿಯನ್ನು ಬ್ರಿಟಿಷರು ಜಾರಿಗೊಳಿಸಿದರು. ಪ್ರಸ್ತುತ ಅಧ್ಯಾಯದಲ್ಲಿ ಕರ್ನಾಟಕದ ಬೃಹತ್ ಕೈಗಾರಿಕೀಕರಣ ಪ್ರಕ್ರಿಯೆ ನಗರೀಕರಣ ಪ್ರಕ್ರಿಯೆಯ ಮೇಲೆ ಬೀರಿದ ಪ್ರಭಾವ, ಪರಿಣಾಮಗಳನ್ನು ವಿಶ್ಲೇಷಿಸುವ ಉದ್ದೇಶವನ್ನು ಹೊಂದಿದೆ.

ಅದೇ ರೀತಿ ಸ್ಥಳೀಯ ಕೈಗಾರಿಕೆಗಳ ನಾಶದ ಕುರಿತು ಸಾಮ್ರಾಜ್ಯಶಾಹಿಗಳು ಮತ್ತು ರಾಷ್ಟ್ರೀಯವಾದಿಗಳು ನಡೆಸಿದ ಪರಸ್ಪರವಾದ ಪ್ರತಿವಾದಗಳನ್ನು ಹಾಗೂ ಅದರ ಹಿಂದಿದ್ದ ಧೋರಣೆಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

ಯುರೋಪಿನಲ್ಲಾದ ಕೈಗಾರಿಕಾ ಕ್ರಾಂತಿಯನ್ನು ಒಂದು ಚಾರಿತ್ರಿಕ ಘಟ್ಟವನ್ನಾಗಿ ಇಟ್ಟುಕೊಂಡು ಕೈಗಾರೀಕರಣ ಮತ್ತು ನಗರೀಕರಣದ ಅಧ್ಯಯನ ಮಾಡುವ ವಿಧಾನದ ಹೆಚ್ಚು ಪ್ರಚಾರದಲ್ಲಿರುವಂತದ್ದು. ಸಾಮ್ರಾಜ್ಯಶಾಹಿ ಚರಿತ್ರೆಕಾರರು ಈ ವಿಧಾನವನ್ನು ಪ್ರಜ್ಞಾಪೂರ್ವಕವಾಗಿ ಬಳಸಿಕೊಂಡರೆ, ರಾಷ್ಟ್ರೀಯವಾದಿಗಳು ಸಾಮ್ರಾಜ್ಯಶಾಹಿಗಳನ್ನು ವಿರೋಧಿಸುವ ಭರದಲ್ಲಿ ಮತ್ತದೇ ವಿಧಾನವನ್ನು ಬಳಸಿಕೊಂಡರು. ಯುರೋಪಿನ ಕೈಗಾರೀಕರಣವನ್ನು ಆಧಾರವನ್ನಾಗಿಟ್ಟುಕೊಂಡು ನಗರಗಳನ್ನು ಕೈಗಾರಿಕಾಪೂರ್ವ ನಗರಗಳು ಹಾಗೂ ಕೈಗಾರಿಕಾ ನಗರಗಳು ಎಂಬುದಾಗಿಯೂ ವಿಂಗಡಿಸಲಾಗಿದೆ. ಇದು ಕೈಗಾರಿಕೀಕರಣದ ಮೂಲಕ ನಗರೀಕರಣವನ್ನು ನೋಡುವ ಪ್ರಯತ್ನವಾಗಿದೆ. ಬ್ರಿಟಿಷರು ಕೈಗಾರಿಕೆ ಮತ್ತು ತಂತ್ರಜ್ಞಾನದ ಪ್ರಯತ್ನವಾಗಿದೆ. ಬ್ರಿಟಿಷರು ಕೈಗಾರಿಕೆ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಾದ ಪ್ರಗತಿಯನ್ನೇ 'ಆಧುನಿಕ' ಎಂಬರ್ಥದಲ್ಲಿ ವ್ಯಾಖ್ಯಾನಿಸಿದರು. ಹಾಗಾದಾಗ ಕೈಗಾರಿಕಾ ಪೂರ್ವ ಎನ್ನುವುದು ಸಾಂಪ್ರದಾಯಿಕ ಎಂದಾಗುತ್ತದೆ. ಇವೆಲ್ಲವೂ ವಸಾಹತು ಸಿದ್ಧಾಂತದೊಳಗಿರುವ ಕೆಲವು ವಿವರಣೆಗಳು ಕೈಗಾರಿಕೆಗಳಿಂದಾಗಿಯೇ ನಗರ ಪ್ರದೇಶಗಳು ನಿರ್ಮಾಣಗೊಳ್ಳುವುದಿಲ್ಲ.

ನಗರೀಕರಣ ಪ್ರಕ್ರಿಯೆಯಲ್ಲಿ ಕೈಗಾರಿಕೆಗಳೂ ಒಂದು ಕಾರಣವಾಗಿ ಕಂಡುಬರುತ್ತವೆ. ವ್ಯಾಪಾರ, ಶಿಕ್ಷಣ, ರಾಜಕೀಯದಂತೆ ಕೈಗಾರಿಕೆಯೂ ನಗರಗಳ ಹುಟ್ಟಿಗೆ ಒಂದು ಕಾರಣವಾಗಿ ಕಂಡುಬರುತ್ತದೆ. ಹಾಗಾಗಿ ಕೈಗಾರಿಕೆಗಳ ಮೂಲಕವೇ ನಗರಗಳನ್ನು ನೋಡಬೇಕೆಂದೇನಿಲ್ಲ. ಆದರೆ ಕೈಗಾರಿಕಾ ಕ್ರಾಂತಿಯ ಬಳಿಕ ಬಂಡವಾಳ ಮತ್ತು ಬಂಡವಾಳಶಾಹಿ ಹಲವಾರು ವಿಚಾರಗಳಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಲಾರಂಭಿಸಿತು. ಆರ್ಥಿಕತೆಯ ಹಿಂದಿನ ಚಾಲಕ ಶಕ್ತಿಯಾಗಿ ಅದು ಬೆಳೆಯಿತು. ವಸಾಹತುಶಾಹಿಯೂ ಕೈಗಾಗಿಕಾ ಬಂಡವಾಳದೊಂದಿಗೆ ತಳುಕು ಹಾಕಿಕೊಂಡಿತು. ಅದಕ್ಕೆ ವಿರುದ್ಧವಾಗಿ ಸಮಾಜವಾದಿ ಚಿಂತನೆಗಳು ಕಾಣಿಸಿಕೊಂಡವು. ಕಾರ್ಮಿಕರ ಸಂಘಟನೆಗಳು, ಕಾರ್ಮಿಕರ ಮುಷ್ಕರಗಳು ಈ ಹಿನ್ನೆಲೆಯಿಂದಲೇ ಹುಟ್ಟಿಕೊಂಡವು. ಆದರೂ ಕೈಗಾರಿಕಾ ಬಂಡವಾಳ ತನ್ನ ಯಜಮಾನಿಕೆಯನ್ನು ಉಳಿಸಿಕೊಂಡೇ ಬಂತು. ಹಾಗೂ ಇನ್ನಿತರ ಕ್ಷೇತ್ರಗಳಿಗೂ ನೇರ ಪ್ರವೇಶ ಪಡೆಯಿತು.

ಯುರೋಪಿನ ಬಂಡವಾಳಶಾಹಿಗಳು ಕೈಗಾರೀಕರಣಕ್ಕೆ ಪೂರಕವಾಗುವಂಥ ಉತ್ಪಾದನಾ ವ್ಯವಸ್ಥೆಗೆ ಒತ್ತು ನೀಡುತ್ತಲೇ ಬಂದರು. ಯುರೋಪಿನ ಕೈಗಾರೀಕರಣಕ್ಕೆ ಪೂರಕವಾಗುವಂಥ

ವ್ಯವಸ್ಥೆಯನ್ನು ಆಫ್ರಿಕಾ ಮತ್ತು ಏಷ್ಯಾ ಖಂಡಗಳಲ್ಲಿ ನಿರ್ಮಿಸುವುದು ಅವರ ಉದ್ದೇಶವಾಗಿತ್ತು. ಅಂದರೆ ಯುರೋಪಿನ ಕೈಗಾರಿಕೆಗಳಿಗೆ ಬೇಕಾಗುವಂಥ ಕಚ್ಚಾ ಸಾಮಗ್ರಿಗಳನ್ನು ಆಫ್ರಿಕಾ ಮತ್ತು ಏಷ್ಯಾದ ದೇಶಗಳಿಂದ ಪಡೆಯುವುದು ಹಾಗೂ ಯುರೋಪಿನಲ್ಲಿ ಸಿದ್ಧಗೊಂಡ ವಸ್ತುಗಳನ್ನು ಮಾರಾಟ ಮಾಡಲು ಮಾರುಕಟ್ಟೆಗಳನ್ನಾಗಿ ಈ ದೇಶಗಳನ್ನು ಬಳಸುವುದು. ಈ ಕಾರಣದಿಂದಾಗಿಯೇ ಭಾರತದಂಥ ದೇಶದಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುವ, ಗಣಿಗಾರಿಕೆಯನ್ನು ನಡೆಸುವ, ಬಂದರು ಪಟ್ಟಣಗಳಿಗೆ ವಿಶೇಷ ಆಧ್ಯತೆಯನ್ನು ನೀಡುವ ಯೋಜನೆಗಳಿಗೆ ಹೆಚ್ಚಿನ ಮಹತ್ವವನ್ನು ಕೊಡಲಾಯಿತು. ಇದರಿಂದಾಗಿ ಅನೇಕ ಪ್ರದೇಶಗಳು ಕೈಗಾರಿಕಾ ಪ್ರದೇಶಗಳನ್ನಾಗಿ, ನಗರ ಪ್ರದೇಶಗಳಾಗಿ ಬೆಳೆದವು. ಆದರೆ ಈ ಪರಿವರ್ತನೆ ಸ್ಥಳೀಯ, ಅರ್ಥ ವ್ಯವಸ್ಥೆಗೆ ನೆರವಾಗಿದ್ದಕ್ಕಿಂತ ಹೆಚ್ಚು ಇಂಗ್ಲೆಂಡಿನ ಅರ್ಥ ವ್ಯವಸ್ಥೆಗೆ ನೆರವಾಯಿತು. ಇದಕ್ಕೆ ಬಲವಂತದ ಕೃಷಿಯ ವಾಣಿಜ್ಯೀಕರಣವೇ ಉತ್ತಮ ಉದಾಹರಣೆಯಾಗಿದೆ.

ಕರ್ನಾಟಕವು ಬ್ರಿಟಿಷ್ ವಸಾಹತುವಾಗಿ ಪರಿವರ್ತನೆಗೊಳ್ಳುವ ಮೊದಲು ಇಲ್ಲಿದ್ದ ಸ್ಥಳೀಯ ಕೈಗಾರಿಕೆಗಳು ಹಾಗೂ ಅವುಗಳ ಸ್ವರೂಪ, ವಸಾಹತುವಾಗಿ ಪರಿವರ್ತನೆಗೊಂಡ ಬಳಿಕ ಅವುಗಳಲ್ಲಾದ ಬದಲಾವಣೆಗಳು, ಬ್ರಿಟಿಷರ ಹೊಸ ಕೈಗಾರಿಕಾ ನೀತಿ ಈ ಮುಂತಾದ ವಿಚಾರಗಳ ಕುರಿತು ಸಾಕಷ್ಟು ಅಧ್ಯಯನಗಳು ನಡೆದಿವೆ. ಅವುಗಳಲ್ಲಿ ಪ್ರಮುಖವಾದದ್ದು ಸಾಮ್ರಾಜ್ಯಶಾಹಿಗಳು ಮತ್ತು ರಾಷ್ಟ್ರೀಯವಾದಿಗಳ ನಡುವೆ ನಡೆದ ವಾಗ್ವಾದಗಳು. ರಾಷ್ಟ್ರೀಯವಾದಿಗಳ ಪ್ರಕಾರ ಇಲ್ಲಿನ ಸಣ್ಣ ಪ್ರಮಾಣದ ಮತ್ತು ಗುಡಿ ಕೈಗಾರಿಕೆಗಳು ಅವನತಿಯ ಅಂಚಿಗೆ ಸರಿಯಲು ಯುರೋಪಿನ ಕೈಗಾರಿಕಾ ಬಂಡವಾಳವೇ ಮೂಲ ಕಾರಣ. ಯುರೋಪಿನ ಬಂಡವಾಳವು ಭಾರತೀಯ ಅರ್ಥವ್ಯವಸ್ಥೆಯ ಮೇಲೆ ಹೆಚ್ಚಿನ ಹಿಡಿತ ಸಾಧಿಸಿದ್ದೇ ಅಲ್ಲದೆ ಅದನ್ನು ಛಿದ್ರಗೊಳಿಸಿತು. ಕೈಗಾರಿಕಾ ಕ್ರಾಂತಿಯ ನಂತರ ಸ್ಥಳೀಯ ಕೈಗಾರಿಕೆಗಳು ಮೂಲೆಗುಂಪಾಗಿ, ಅವುಗಳಲ್ಲಿ ಕೆಲಸ ಮಾಡುತ್ತಿದ್ದ ಕುಶಲಕರ್ಮಿಗಳು ನಿರುದ್ಯೋಗಿಗಳಾಗುವಂತಾಯಿತು. ರಾಷ್ಟ್ರೀಯವಾದಿಗಳ ಈ ವಾದಕ್ಕೆ ಸಾಮ್ರಾಜ್ಯಶಾಹಿಗಳು ಪ್ರತಿವಾದ ಹೂಡುತ್ತಾ, ಭಾರತದ ಗುಡಿ ಕೈಗಾರಿಕೆಗಳು ಬ್ರಿಟಿಷರ ಆಗಮನದ ವೇಳೆಗೆ ಅವಾಗಿಯೇ ಅವನತಿಯತ್ತ ಹೋಗಿದ್ದವು. ಹಾಗೂ ತಂತ್ರಜ್ಞಾನದಲ್ಲಿ ಅವು ಬಹಳ ಹಿಂದುಳಿದ್ದಿದ್ದವು ಎಂಬುದಾಗಿ ತಮ್ಮ ವಾದವನ್ನು ಸಮರ್ಥಿಸಿಕೊಂಡರು. ಆದರೆ ಹೊಸ ಕೈಗಾರಿಕೆಗಳ ಆಗಮನ ಮತ್ತು ಹೊಸ ಕೈಗಾರಿಕಾ ನೀತಿ ಸ್ಥಳೀಯ ಕೈಗಾರಿಕೆಗಳ ಮೇಲೆ ಬೀರಿದ ಕೆಟ್ಟ ಪರಿಣಾಮಗಳ ಕುರಿತು ಅರಿವಿದ್ದರೂ ಉದ್ದೇಶಪೂರ್ವಕವಾಗಿ ಬ್ರಿಟಿಷ್ ಆಡಳಿತವನ್ನು ಸಮರ್ಥಿಸಿಕೊಂಡರು. ಸಾಮ್ರಾಜ್ಯಶಾಹಿಗಳ ಪ್ರಕಾರ ಬ್ರಿಟಿಷರ ಆಗಮನಕ್ಕಿಂತ ಮೊದಲು ಭಾರತದಲ್ಲೇನೋ ಕೈಗಾರಿಕಾ ಕ್ರಾಂತಿ ನಡೆದಿರಲಿಲ್ಲ. ಹಾಗಾಗಿ ಕೈಗಾರಿಕೆಗಳ ಅವನತಿ ಎನ್ನುವ ಮಾತೇ ಹುಟ್ಟಿಕೊಳ್ಳುವುದಿಲ್ಲ. ಬ್ರಿಟಿಷ್ ಆಳ್ವಿಕೆಯಲ್ಲಿ ಹತ್ತಿ ಉದ್ಯಮದಂಥ

ಕೆಲವು ಕೈಗಾರಿಕೆಗಳು ಪ್ರೋತ್ಸಾಹ ಕಂಡಿದ್ದರ ಬಗ್ಗೆ ಹಾಗೂ ಕೆಲವು ಹೊಸ ಕೈಗಾರಿಕೆಗಳು ಸ್ಥಾಪನೆಗೊಂಡಿದ್ದರ ಬಗ್ಗೆ ರಾಷ್ಟ್ರೀಯವಾದಿಗಳು ಮೌನವಹಿಸಿದರೆ, ಯುರೋಪಿನ ಕೈಗಾರಿಕಾ ಬಂಡವಾಳ ಇಲ್ಲಿನ ಅರ್ಥವ್ಯವಸ್ಥೆಯನ್ನೇ ಬುಡಮೇಲು ಮಾಡಿದ್ದರ ಬಗ್ಗೆ ಸಾಮ್ರಾಜ್ಯಶಾಹಿಗಳು ಮೌನ ವಹಿಸುತ್ತಾರೆ.

ವಸಾಹತು ಆಳ್ವಿಕೆಯಲ್ಲಿ ವಾಣಿಜ್ಯ ಬೆಳೆಗಳಿಗೆ ಸಂಬಂಧಿಸಿದ ಕೆಲವು ಕೈಗಾರಿಕೆಗಳು ಸ್ಥಾಪನೆಗೊಂಡಿದ್ದು ನಿಜ. ಅದೇ ರೀತಿ ಬ್ರಿಟಿಷ್ ಅಗತ್ಯಗಳನ್ನು ಪೂರೈಸುವ ಕೆಲವು ಬೃಹತ್ ಕೈಗಾರಿಕೆಗಳು ಸ್ಥಾಪನೆಗೊಂಡವು. ಈ ಎಲ್ಲ ವಿಚಾರಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

ಹತ್ತೊಂಬತ್ತನೆಯ ಶತಮಾನದ ದ್ವಿತೀಯಾರ್ಧ ಮತ್ತು ೨೦ನೇ ಶತಮಾನದ ಮೊದಲಾರ್ಧದಲ್ಲಿ ಬ್ರಿಟಿಷರು ಕರ್ನಾಟಕದಲ್ಲಿ ಹಲವಾರು ಕೈಗಾರಿಕೆಗಳನ್ನು ಸ್ಥಾಪನೆ ಮಾಡಿದರು. ಅವುಗಳಲ್ಲಿ ಮೈಸೂರು ಸಂಸ್ಥಾನದಲ್ಲಿ ಸ್ಥಾಪನೆಗೊಂಡ ಕೈಗಾರಿಕೆಗಳ ಸಂಖ್ಯೆಯೇ ಹೆಚ್ಚಿನದು. ಮೈಸೂರು ಸಂಸ್ಥಾನವು ಯೋಜನಾಬದ್ಧ ಆರ್ಥಿಕ ಪ್ರಗತಿಯತ್ತ ಮುನ್ನಡೆಯಿತು. ಅದಕ್ಕೆ ಅಂದಿನ ದಿವಾನರುಗಳು, ಯುರೋಪಿನ ಕೈಗಾರಿಕಾ ಕ್ರಾಂತಿಯ ಅರಿವು, ಶಿಕ್ಷಣ ಕ್ಷೇತ್ರಗಳಲ್ಲಾದ ಬದಲಾವಣೆಗಳು ಮೂಲ ಕಾರಣ.

"ಮುಂಬೈ ಕರ್ನಾಟಕದ ಪ್ರದೇಶಗಳಲ್ಲಿ ಹತ್ತಿಗೆ ಸಂಬಂಧಿಸಿದ ಉದ್ಯಮಗಳು ಸ್ಥಾಪನೆಗೊಳ್ಳುವುದಕ್ಕೆ ೧೮೬೦ರ ದಶಕದಲ್ಲಿ ಅಮೆರಿಕಾದಲ್ಲಿ ಕಾಣಿಸಿಕೊಂಡ ಅಂತರ್ಯುದ್ಧ ಮೂಲ ಕಾರಣವಾಯಿತು. ಮದರಾಸು ಪ್ರೆಸಿಡೆನ್ಸಿಗೆ ಸೇರಿದ ಕರ್ನಾಟಕದ ಪ್ರದೇಶಗಳಲ್ಲಿ ಖಾಸಗಿ ಸಂಸ್ಥೆಯಾದ ಬಾಷಲ್ ಮಿಶನ್ ಕೈಗಾರಿಕೆಗಳ ಸ್ಥಾಪನೆಗೆ ಚಾಲನೆ ನೀಡಿತು. ಹೀಗೆ ಕರ್ನಾಟಕದ ವಿವಿಧ ಪ್ರದೇಶಗಳು ಬೇರೆ ಬೇರೆ ಹಿನ್ನೆಲೆಯಿಂದಲೇ ಕೈಗಾರಿಕೆಗಳನ್ನು ಬರಮಾಡಿಕೊಂಡವು. ಅಂದರೆ ಲಾರ್ಡ್ ರಿಪ್ಪನ್‌ನ ಆಳ್ವಿಕೆಯ ಅವಧಿಯಲ್ಲಿ ಸ್ಥಳೀಯ ಕೈಗಾರಿಕೆಗಳಿಗೆ ನೆರವಾಗಬಲ್ಲ ಕೆಲವೊಂದು ಪ್ರಯತ್ನಗಳು ನಡೆದಿದ್ದವು. ಲಾರ್ಡ್ ರಿಪ್ಪನ್‌ನ ಆಳ್ವಿಕೆಯ ಅವಧಿಯಲ್ಲಿ ಸ್ಥಳೀಯ ಉತ್ಪಾದಕರಿಗೆ ಹೆಚ್ಚಿನ ಪ್ರೋತ್ಸಾಹ ದೊರಕಿತು. ಸ್ಥಳೀಯ ಉದ್ದಿಮೆದಾರರಿಗೆ ಹೊಸ ಯೋಜನೆಗಳಲ್ಲಿ ಪಾಲು ದೊರಕುವಂತಾಯಿತು. ಹತ್ತಿ ಗಿರಣಿ ಕೆಲಸ ಕಾರ್ಯಗಳಲ್ಲಿ ಸ್ಥಳೀಯ ಉದ್ದಿಮೆದಾರರು ಭಾಗವಹಿಸುವಂತಾಯಿತು. ರಿಪ್ಪನ್‌ನ ೧೮೭೬ರ ಆದೇಶವೊಂದು ಸ್ಥಳೀಯವಾಗಿ ಉತ್ಪಾದನೆಗೊಳ್ಳುವ ಉದ್ದಿಮೆಗಳಿಗೆ ಬಳಕೆಯಾಗುವಂಥ ವಸ್ತುಗಳನ್ನು ಸರಕಾರ ಖರೀದಿಸಬೇಕು ಹಾಗೂ ಆದ್ಯತೆ ನೀಡಬೇಕೆಂದು ಸೂಚಿಸಿತು. ಇದು ಸ್ಥಳೀಯವಾಗಿ ಕೈಗಾರಿಕೆಗಳು ಹುಟ್ಟಿಕೊಳ್ಳಲು ಹಾಗೂ ಅವುಗಳು ತಯಾರಿಸುವ ಉತ್ಪನ್ನಗಳಿಗೆ ಬೇಡಿಕೆ ಹೆಚ್ಚುವಂತೆ ಮಾಡಿತು. ಆದರೆ ಇಂಗ್ಲೆಂಡ್ ಭಾರತದ ಕೈಗಾರಿಕೆಗಳನ್ನು ರಕ್ಷಿಸುವ ರಿಪ್ಪನ್‌ನ ಹೊಸ ನೀತಿಯನ್ನು ಸ್ವಾಗತಿಸಲಿಲ್ಲ. ಆದರೂ ಅದು ಕೆಲಮಟ್ಟಿಗೆ ಯಶಸ್ವಿಯಾಯಿತು."[೧]

ಮುಂಬಯಿ ಕರ್ನಾಟಕದ ಪ್ರದೇಶಗಳಲ್ಲಿ ಹತ್ತಿಗೆ ಸಂಬಂಧಿಸಿದ ಉದ್ಯಮಗಳು ಅಂದು ಸ್ಥಾಪನೆಗೊಳ್ಳುವುದಕ್ಕೆ ೧೮೬೦ರ ದಶಕದಲ್ಲಿ ಅಮೇರಿಕಾದಲ್ಲಿ ಕಾಣಿಸಿಕೊಂಡ ಅಂತರ್ಯುದ್ಧ ಮೂಲ ಕಾರಣವಾಯಿತು. ಈ ಕಾರಣಗಳಿಂದಲೇ ಕೈಗಾರಿಕೆಗಳು ಅತೀ ವ್ಯಾಪಕವಾಗಿ ಬೆಳೆಯಲು ಒಂದು ಕಾರಣವಾಯಿತು. ಇದರಿಂದಲೇ ಇಂದು ಪಿಂಜಾರ ಸಮುದಾಯದವರು ತಮ್ಮ ಮೂಲ ವೃತ್ತಿಯನ್ನು ಬಿಡಲು ಕಾರಣವಾಯಿತೆಂದು ಹೇಳಬಹುದು. ಅಂದು ಈ ಕೈಗಾರಿಕೆಗಳು ಬೆಳೆಯದೇ ಇದ್ದಿದ್ದರೆ ಇಂದು ಪಿಂಜಾರ ಸಮುದಾಯದವು ತಮ್ಮ ಮೂಲ ವೃತ್ತಿಯನ್ನು ಅನುಸರಿಸಿಕೊಂಡು ಬರುತ್ತಿದ್ದರು. ಒಂದು ಕಡೆ ಕೈಗಾರಿಕೆಗಳಿಂದ ಸ್ವಲ್ಪ ಮಟ್ಟಿಗೆ ಸುಧಾರಣೆಯಾಗುತ್ತಿದ್ದರೆ ಇನ್ನೊಂದಡೆ ಅಪಾಯಕಾರಿಯಾಗಿದೆ ಎಂದು ಹೇಳುವುದರಲ್ಲಿ ಸಂದೇಹವೇ ಇಲ್ಲ ಎಂದು ಹೇಳಬಹುದು.

ಬ್ರಿಟಿಷ್ ಆಳ್ವಿಕೆಯಲ್ಲಿ ಹತ್ತಿಗೆ ಪ್ರಾಮುಖ್ಯತೆಯನ್ನು ಕೊಟ್ಟಿರುವುದರಿಂದ ಬಟ್ಟೆಯ ಗಿರಣಿಗಳು ಹೆಚ್ಚಾಗಿ ಸ್ಥಾಪಿತವಾದವು. ಮೊದಲಿಗೆ ಕೇವಲ ಗೃಹಕೈಗಾರಿಕೆಯಾಗಿದ್ದ ನೇಯ್ಗೆಯು ೧೯ನೆಯ ಶತಮಾನದಲ್ಲಿ ಕಾರ್ಖಾನೆಗಳನ್ನು ಪ್ರವೇಶಿಸಿತು. ಬೆಂಗಳೂರಿನಲ್ಲಿ ಎರಡು ಭಾರಿ ಪ್ರಮಾಣದ ಬಟ್ಟೆಯ ಗಿರಣಿಗಳು ಆರಂಭಗೊಂಡವು. 'ಅವುಗಳೆಂದರೆ ೧೮೮೪ರಲ್ಲಿ ಆರಂಭಗೊಂಡ ಬೆಂಗಳೂರು ಉಣ್ಣೆ, ಹತ್ತಿ ಮತ್ತು ರೇಷ್ಮೆ ಕಾರ್ಖಾನೆ ಮತ್ತು ೧೮೯೪ರಲ್ಲಿ ಸ್ಥಾಪನೆಗೊಂಡ ಮೈಸೂರು ಸ್ಪಿನ್ನಿಂಗ್ ಮತ್ತು ಮ್ಯಾನುಫಾಕ್ಚರಿಂಗ್ ಕಂಪನಿ ಲಿ. ಇವು ಕರ್ನಾಟಕದಲ್ಲಿ ಆರಂಭಗೊಂಡ ಮೊದಲ ಬೃಹತ್ ಪ್ರಮಾಣದ ಹಾಗೂ ಮುಂದುವರಿದ ತಂತ್ರಜ್ಞಾನವನ್ನು ಅಳವಡಿಸಿಕೊಂಡಿದ್ದ ಗಿರಣಿಗಳು.

"ಮೈಸೂರು ಸಂಸ್ಥಾನದಲ್ಲಿ ಕೈಗಾರಿಕಾ ಅಭಿವೃದ್ಧಿಗೆ ಆಗಿನ ಆಡಳಿತಗಾರರು, ವಿಶೇಷವಾಗಿ ದಿವಾನವರ ಕೊಡುಗೆಯೇ ಹೆಚ್ಚು. ೧೯೩೧ರ ನಂತರ ಕೈಗಾರಿಕೆಗಳ ಸ್ಥಾಪನೆಗೆ ಮತ್ತಷ್ಟು ಉತ್ತೇಜನ ಸಿಕ್ಕಿತು. ವಿಶ್ವೇಶ್ವರಯ್ಯನವರ ಪ್ರಯತ್ನಗಳಿಂದಾಗಿ ಖಾಸಗಿ ಸಂಸ್ಥೆಯವರು ಕೈಗಾರಿಕೆಗಳನ್ನು ಆರಂಭಿಸುವಂತೆ ಹಾಗೂ ಸರಕಾರವು ನೇರವಾಗಿ ಹಲವಾರು ಉದ್ಯಮಗಳಲ್ಲಿ ಬಂಡವಾಳ ಹೂಡುವಂತೆ ಆಯಿತು. ಭದ್ರಾವತಿಯಲ್ಲಿ ಕಾಗದದ ತಯಾರಿಕಾ ಸಂಸ್ಥೆಯಾದ ಭದ್ರಾವತಿ ಪೇಪರ್ ಮಿಲ್ ಲಿ. ಸರ್ಕಾರದ ಬಂಡವಾಳದೊಂದಿಗೆ ೧೯೩೪ರಲ್ಲಿ ಆರಂಭಗೊಂಡಿತು. ೧೯೩೬ರಲ್ಲಿ ದಾವಣಗೆರೆಯಲ್ಲಿ ಕಾಟನ್ ಮಿಲ್ಸ್ ಲಿ. ಸಂಸ್ಥೆಯು ಆರಂಭಗೊಂಡಿತು. ಇದು ನಗರದ ಮೊದಲ ಹತ್ತಿ ಗಿರಣಿಯಾಗಿತ್ತು. ೧೯೪೬ರಲ್ಲಿ ಶ್ರೀಗಣೇಶ ಹತ್ತಿ ಗಿರಣಿ ಸ್ಥಾಪನೆಗೊಂಡವು. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲೂ ಅನೇಕ ಹತ್ತಿ ಗಿರಣಿಗಳು ಸ್ಥಾಪನೆಗೊಂಡು ದಾವಣಗೆರೆಯು ಕರ್ನಾಟಕದ ಮ್ಯಾಚೆಂಸ್ಟರ್ ಎಂಬುದಾಗಿ ಬಿಂಬಿತವಾಗಿತ್ತು. ದಾವಣಗೆರೆಯು ಹತ್ತಿಯ ಉತ್ಪಾದನೆ ಹಾಗೂ ಹತ್ತಿಗೆ

ಸಂಬಂಧಿಸಿದ ಉದ್ದಿಮೆಗಳಿಗೆ ಹೆಸರುವಾಸಿಯಾಯಿತು. ಸ್ವದೇಶಿ ಚಳವಳಿಯ ಸಂದರ್ಭದಲ್ಲಿ ಖಾದಿ ಉದ್ಯಮವು ಹೆಚ್ಚಾಗಿ ಬೆಳೆಯಿತು.[೨೨]

ವಿಶ್ವೇಶ್ವರಯ್ಯನವರ ಪ್ರಯತ್ನಗಳಿಂದಾಗಿ ಖಾಸಗಿ ಸಂಸ್ಥೆಯವರು ಕೈಗಾರಿಕೆಗಳನ್ನು ಆರಂಭಿಸುವಂತೆ ಹಾಗೂ ಸರ್ಕಾರವು ನೇರವಾಗಿ ಹಲವಾರು ಉದ್ಯಮಗಳಲ್ಲಿ ಬಂಡವಾಳ ಹೂಡುವಂತೆ ಆಯಿತು. ಈ ಕಾರಣಗಳಿಂದಲೇ ಪಿಂಜಾರ ಸಮುದಾಯದವರು ಬಂಡವಾಳವನ್ನು ಹಾಕಿ ಗಾದಿಗಳನ್ನು ಮಾಡಲು ಆರಂಭಿಸಿದರು. ಇನ್ನೊಂದಡೇ ತಮ್ಮ ಮೂಲ ವೃತ್ತಿಗೆ ಇಷ್ಟೊಂದು ಬಂಡವಾಳ ಹಾಕಲು ಆಗದೇ ತಾವು ಕೈಬಿಟ್ಟಿದ್ದು ಶೋಚನೀಯವಾಗಿದೆ ಎಂದು ಹೇಳಬಹುದು. ಈ ಕಾರಣಗಳಿಂದ ಗಾದಿಯನ್ನು ತಳಮಟ್ಟಕ್ಕೆ ಇಳಿಮುಖವಾಗಿದೆ.

ಮುಂಬಯಿ ಕರ್ನಾಟಕದ ಪ್ರದೇಶಗಳಲ್ಲಿ ಹತ್ತಿ ಪ್ರಮುಖ ಬೆಳೆಯಾಗಿದ್ದರಿಂದ ಹತ್ತಿಯಾಧಾರಿತ ಕೈಗಾರಿಕೆಗಳು ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪನೆಯಾದವು. ಹತ್ತಿಯನ್ನು ಕೀಳುವ, ಗಂಟುಕಟ್ಟುವ, ನೇಯುವ, ಬಣ್ಣ ಹಾಕುವ ಕಾರ್ಖಾನೆಗಳು ಪ್ರದೇಶಗಳಲ್ಲಿ ಅಸ್ತಿತ್ವಕ್ಕೆ ಬಂದವು. ಮುಂಬಯಿ ಕರ್ನಾಟಕದ ಗೋಕಾಕ, ಚಿಕ್ಕೋಡಿ, ಸಂಕೇಶ್ವರ, ಬೈಲಹೊಂಗಲ, ಬೆಳಗಾವಿ, ಮುರಗೋಡು, ಅಥಣಿ, ದೇಶನೂರು, ಶಹಾಪುರ, ಸವದತ್ತಿ, ಕಿತ್ತೂರು, ಮುನ್ನೊಳ್ಳಿ, ಹುಬ್ಬಳ್ಳಿ, ಗದಗ, ಬೆಟಗೇರಿ, ಲಕ್ಕುಂಡಿ, ನರಗುಂದ, ಅಣ್ಣಿಗೇರಿ, ಇಲಕಲ್, ಹುನಗುಂದ, ಗುಡೂರು, ಮಲ್ಲಾಪುರ, ಬಾಗಲಕೋಟೆ ಮೊದಲಾದ ಪ್ರದೇಶಗಳಲ್ಲಿ ಸೀರೆ, ಧೋತಿ, ರುಮಾಲು, ಜಮಖಾನೆ ಹಾಗೂ ಖಾದಿ ಸಿದ್ಧಉಡುಪುಗಳನ್ನು ತಯಾರಿಸುವ ಕೈಗಾರಿಕೆಗಳು ಇದ್ದವು. ೧೮೮೫ರಲ್ಲಿ ಗೋಕಾಕ್‌ನಲ್ಲಿ ಹಾಗೂ ೧೮೯೮ರಲ್ಲಿ ಹುಬ್ಬಳ್ಳಿಯಲ್ಲಿ ಬಟ್ಟೆ ಗಿರಣಿಗಳು ಆರಂಭಗೊಂಡವು.

ಬ್ರಿಟಿಷರ ತಂತ್ರಜ್ಞಾನ ಹಾಗೂ ವೈಜ್ಞಾನಿಕ ಪವರ್‌ಲೂಮ್‌ಗಳಿಂದಾಗಿ ಅನೇಕ ಸ್ಥಳೀಯ ಕೈಗಾರಿಕೆಗಳು ತೊಂದರೆಗಳನ್ನು ಎದುರಿಸಬೇಕಾಗಿ ಬಂತು. ವಿದೇಶಿ ವಸ್ತುಗಳು ಆಕರ್ಷಣೀಯವಾಗಿ ಮಾರುಕಟ್ಟೆಗಳಲ್ಲಿ ಲಭ್ಯವಿದ್ದ ಕಾರಣ ಲಕ್ಷಾಂತರ ಜನರು ತಮ್ಮ ಉದ್ಯೋಗದಲ್ಲಿನ ಬೇಡಿಕೆ ಮತ್ತು ಹಿಡಿತವನ್ನು ಕಳೆದುಕೊಳ್ಳುವಂತಾಯಿತು. ಈ ಎಲ್ಲ ಕಾರಣಗಳಿಂದ ಪಿಂಜಾರ ಸಮುದಾಯದವರ ಮೂಲವೃತ್ತಿಗೆ ಸಂಚಕಾರವಾಗಿದೆ.

ಹೈದರಾಬಾದ್ ಕರ್ನಾಟಕದ ಬೀದರ್, ಗುಲಬರ್ಗಾ, ಮತ್ತು ರಾಯಚೂರುಗಳಲ್ಲಿ ಹತ್ತಿಗೆ ಸಂಬಂಧಿಸಿದ ಗಿರಣಿಗಳು ಹೆಚ್ಚಾಗಿ ಸ್ಥಾಪನೆಗೊಂಡವು. ಗುಲಬರ್ಗಾದಲ್ಲಿ ೧೮೮೪ರಲ್ಲಿ ಹೈದರಾಬಾದಿನ ನಿಜಾಮನ ಸರಕಾರದ ನೆರವಿನೊಡನೆ ಮೆಹಬೂಬ ಷಾಹಿ ಕಲ್ಬುರ್ಗಿ ಮೀಲ್ಸ್ ಕಂಪನಿ, ಲಿ. ಹೆಸರಿನ ಬಟ್ಟೆ ಗಿರಣಿ ಸ್ಥಾಪಿಸಲಾಯಿತು. ಈ ಬಟ್ಟೆ

ಗಿರಣಿಯನ್ನು ೧೮೮೮ರಲ್ಲಿ ಭಾರತೀಯ ಕಂಪನಿಗಳ ಕಾಯಿದೆ ಪ್ರಕಾರ ಎಂ.ಎಸ್.ಕೆ. ಮಿಲ್ಸ್ ಕಂಪನಿ ಲಿಮಿಟೆಡ್ ಎಂಬುದಾಗಿ ನೋಂದಣಿ ಮಾಡಲಾಯಿತು. ಈ ಕಂಪನಿಯ ಹುಟ್ಟಿಗೆ ಬೆಂಗಳೂರಿನವರಾದ ಸಭಾಪತಿ ಅಯ್ಯ ಮತ್ತು ಅಖಿಲಾಂಡಯ್ಯ ಎನ್ನುವವರು ಕಾರಣವಾದರು. ಇವರು ಗುಲಬರ್ಗಾದಲ್ಲಿ ಒಂದು ನೂಲುವ ಮತ್ತು ನೇಯುವ ಕಾರ್ಖಾನೆಯನ್ನು ಸ್ಥಾಪಿಸಲು ಸನ್ನದು ಅಥವಾ ಅನುಮತಿ ನೀಡಬೇಕೆಂದು ನಿಜಾಂ ಸರಕಾರವನ್ನು ಕೋರಿದರು. ಸರಕಾರವು ಸಭಾಪತಿ ಮತ್ತು ಕಂಪನಿ ಎಂಬ ಹೆಸರಿನಲ್ಲಿ ಸನದವನ್ನು ಮಂಜೂರು ಮಾಡಿತು. ಇದನ್ನು ಮದರಾಸಿನಲ್ಲಿ ೧೮೮೩ ಜುಲೈ ೧೨ರಂದು ಮೆಹಬೂಬ್ ಷಾಹಿ ಕಲ್ಬುರ್ಗಿ ಮಿಲ್ಸ್ ಕಂಪನಿ ಲಿ. ಎಂಬ ಹೆಸರಿನಲ್ಲಿ ನೋಂದಾಯಿಸಲಾಯಿತು. ಎಂ.ಎಸ್.ಕೆ. ಮಿಲ್ ಹೈದರಾಬಾದ್ ಕರ್ನಾಟಕದಲ್ಲಿ ಪ್ರಮುಖ ಜವಳಿ ಉದ್ದಿಮೆಯಾಗಿತ್ತು. ಈ ಮಿಲ್‌ನಲ್ಲಿ ವಿವಿಧ ರೀತಿಯ ಬಟ್ಟೆಗಳನ್ನು ಉತ್ಪಾದಿಸಲಾಗುತ್ತಿತ್ತು. ಸೀರೆ, ಪಂಚೆ, ಪಾಲಿಸ್ಟರ್, ಕಾಟನ್ ಮುಂತಾದವುಗಳು ಇದರಲ್ಲಿ ಉತ್ಪಾದನೆಗೊಂಡು ಬೇರೆ ಪ್ರದೇಶಗಳಿಗೆ ರಫ್ತಾಗುತ್ತಿದ್ದವು. ಗುಲಬರ್ಗಾ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಹತ್ತಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಲಾಗುತ್ತಿದ್ದುದ್ದರಿಂದ ಈ ಮಿಲ್‌ನ ಅವಶ್ಯಕತೆ ಇತ್ತು.

ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ಇದ್ದ ಕೈಮಗ್ಗದ ಬಟ್ಟೆಯ ಕೈಗಾರಿಕೆಗಳು ಮಿಲ್ ಬಟ್ಟೆ ಬಂದಾಗಿನಿಂದ ಕಷ್ಟವನ್ನು ಎದುರಿಸತೊಡಗಿದವು. ಕೈಮಗ್ಗದ ಬಟ್ಟೆಯ ಸ್ಥಾನವನ್ನು ಮಿಲ್ ಬಟ್ಟೆ ಆಕ್ರಮಿಸಿಕೊಂಡಿತು. ಕುಂಬಾರಿಕೆ, ಕಲ್ಲು ಕೆಲಸ, ಮರಗೆಲಸ, ಚಿನ್ನದ ಕೆಲಸ, ಕಮ್ಮಾರಿಕೆ ಮುಂತಾದವು ಈ ಪ್ರಾಂತದ ಹಳೆಯ ಗ್ರಾಮೀಣ ಹಾಗೂ ನಗರ ಅರ್ಥ ವ್ಯವಸ್ಥೆಯ ಭಾಗವಾಗಿದ್ದವು. ವಸಾಹತುಪೂರ್ವ ಅವಧಿಯಲ್ಲೂ ಈ ಪ್ರಾಂತ್ಯದಲ್ಲಿ ದೊಡ್ಡ ಪ್ರಮಾಣದಲ್ಲಿ ಕೈಗಾರಿಕೆಗಳು ಇರಲಿಲ್ಲ. ಹೊಳಪಿನ ಸುಣ್ಣಕಲ್ಲು, ಶಹಾಬಾದ್, ಚಿತ್ತಾಪುರ, ಸೇಡಂಗಳಲ್ಲಿ ಸಿಗುತ್ತಿದ್ದ ಅತ್ಯಂತ ಮುಖ್ಯವಾದ ಖನಿಜವಾಗಿತ್ತು. ಈ ಕಲ್ಲನ್ನು ಶಹಾಬಾದ್ ಕಲ್ಲು ಎಂಬುದಾಗಿಯೂ ಕರೆಯಲಾಗುತ್ತಿತ್ತು. ಈ ಕಲ್ಲನ್ನು ಬಹಳವಾಗಿ ಚಾವಣಿ ಮತ್ತು ನೆಲಗಳಿಗೆ ಬಳಸುತ್ತಿದ್ದರು. ನಿಜಾಮನ ಕಾಲದಲ್ಲಿ ಇದ್ದ ಇನ್ನೊಂದು ಕೈಗಾರಿಕೆ ಫೆಜ್ ಟೋಪಿಗಳಿಗೆ ಹಾಕುವ ಕುಚ್ಚುಗಳ ತಯಾರಿಕೆ ಈ ಉದ್ಯಮದಲ್ಲಿ ಸುಮಾರು ಜನ ಕೆಲಸ ಮಾಡುತ್ತಿದ್ದರು.

ಹೀಗೆ ಹಲವಾರು ರೀತಿಗಳಿಂದ ಬೃಹತ್ ಕೈಗಾರಿಕೆಗಳ ಪ್ರಭಾವ ಬೀರಿತು ಎಂದು ಹೇಳಬಹುದು.

## ೪.೩ ಬಂಡವಾಳಶಾಹಿಗಳ ಪ್ರವೇಶ

ಬಂಡವಾಳವು ಆರ್ಥಿಕಾಭಿವೃದ್ಧಿಯ ಯಂತ್ರವಿದ್ದ ಹಾಗೆ. ಈ ಯಂತ್ರ ಸರಿಯಾದ ರೀತಿಯಲ್ಲಿ ಕಾರ್ಯಾಚರಣೆ ಮಾಡಿದರೆ ಮಾತ್ರ ಆರ್ಥಿಕ ಪ್ರಗತಿ ಸಾಧ್ಯ. ಜಗತ್ತಿನ ಹೆಚ್ಚು ದೇಶಗಳು ಹಿಂದುಳಿದಿರಲು ಮೂಲ ಕಾರಣ ಬಂಡವಾಳದ ಕೊರತೆ. ಇಂದು ಜಗತ್ತಿನಲ್ಲಿ ನಾವು ನೋಡುತ್ತಿರುವ ಶ್ರೀಮಂತ ದೇಶಗಳು ಅಗಾಧ ಪ್ರಮಾಣದ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಾಗಿರುವುದು ಬಂಡವಾಳದಿಂದಲೇ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಬಂಡವಾಳ ದೇಶದ ಪ್ರಗತಿಯ ಉಸಿರು. ಆರ್ಥಿಕಾಭಿವೃದ್ಧಿ ಜೀವಾಳ. ಬಂಡವಾಳದಲ್ಲಿ ಪ್ರಮುಖವಾಗಿ ಎರಡು ವಿಧಗಳು. ೧) ಸ್ವದೇಶಿ ಬಂಡವಾಳ ಮತ್ತು ೨) ವಿದೇಶಿ ಬಂಡವಾಳ. ವಿದೇಶಿ ಬಂಡವಾಳವು ಇಂದು ವಿವಿಧ ದೇಶಗಳ ಆರ್ಥಿಕಾಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುತ್ತಿದೆ.

ಬಂಡವಾಳದ ಕೊರತೆಯನ್ನು ಅನುಭವಿಸುತ್ತಿರುವ ಹಿಂದುಳಿದ ದೇಶಗಳ ಆರ್ಥಿಕಾಭಿವೃದ್ಧಿಯಲ್ಲಿ ವಿದೇಶಿ ಬಂಡವಾಳದ ಪಾತ್ರ ಹಿರಿದು. ವಿದೇಶಿ ಬಂಡವಾಳವೆಂದರೆ. ಕೇವಲ ವಿದೇಶಿ ಹಣದ ನೆರವು ಎಂದುಕೊಂಡರೆ ತಪ್ಪಾಗುತ್ತದೆ. ಏಕೆಂದರೆ. ಇಂದು ವಿದೇಶಿ ಬಂಡವಾಳದ ಹೆಸರಿನಲ್ಲಿ ಯಂತ್ರಗಳ. ತಂತ್ರಜ್ಞಾನ, ತರಬೇತಿ, ಉತ್ಪಾದನಾ ನೈಪುಣ್ಯತೆ ಮುಂತಾದವುಗಳೂ ಕೂಡ ಲಭ್ಯವಾಗುತ್ತಿವೆ. ಆದ್ದರಿಂದ ವಿದೇಶಿ ಬಂಡವಾಳವನ್ನು ಸೌಮ್ಯ ಭಾಷಯಲ್ಲಿ ವಿದೇಶಿ ನೆರವು ಎಂದು ಕರೆಯಬಹುದು. ವಿದೇಶಿ ಬಂಡವಾಳವು ಇಂದು ಎಲ್ಲಿಲ್ಲದ ಪ್ರಾಮುಖ್ಯತೆ ಪಡೆದಿರುವುದು ಮುಂಬರುವ ಚರ್ಚೆಯಲ್ಲಿ ವೇದ್ಯವಾಗುತ್ತದೆ. ಆರ್ಥಿಕಾಭಿವೃದ್ಧಿಗಾಗಿ ವಿದೇಶಿ ಬಂಡವಾಳವನ್ನು ಆಮದು ಮಾಡಿಕೊಳ್ಳುವ ಪರಿಪಾಠ ಹೊಸದೇನಲ್ಲ. ಇಂದು ಮುಂದುವರಿದ ಶ್ರೀಮಂತ ದೇಶಗಳೆಂದು ಕರೆಸಿಕೊಳ್ಳತ್ತಿರುವ ದೇಶಗಳೂ ಕೂಡಾ ಅಭಿವೃದ್ಧಿಯ ಪ್ರಾರಂಭಿಕ ಹಂತದಲ್ಲಿ ವಿದೇಶಿ ಬಡವಾಳವನ್ನು ಬಳಸಿಕೊಂಡಿವೆ. ೧೭ ಮತ್ತು ೧೮ನೇ ಶತಮಾನದಲ್ಲಿ, ಇಂಗ್ಲೆಂಡ್, ಹಾಲೆಂಡ್ ದೇಶದಿಂದ ಬಂಡವಾಳದ ನೆರವು ಪಡೆದಿದ್ದಾರೆ. ೧೯ನೇ ಶತಮಾನದಲ್ಲಿ ಯೂರೋಪಿನಿಂದ ಬೃಹತ್ ಪ್ರಮಾಣದಲ್ಲಿ ಹಣ ಹರಿದು ಬಂದುದರಿಂದ ಅಮೇರಿಕಾ ತೀವ್ರ ಪ್ರಗತಿ ಸಾಧಿಸುವುದು ಸಾದ್ಯವಾಯಿತು. ರಷ್ಯಾ ಕೂಡಾ ಪ್ರಾರಂಭದಲ್ಲಿ ವಿದೇಶಿ ಹಣದ ನೆರವಿನಿಂದಲೇ ಪ್ರಗತಿ ಸಾಧಿಸಿತು, ವಿದೇಶಿ ಬಂಡಾವಾಳದ ನೆರವಿನಿಂದ ಅನೇಕ ದೇಶಗಳು ತ್ವರಿತ ಆರ್ಥಿಕಾಭಿವೃದ್ಧಿಯನ್ನು ಸಾಧಿಸಿದವು ಎಂಬುದರಲ್ಲಿ ಎರಡು ಮಾತಿಲ್ಲ. ೧೮ ಮತ್ತು ೧೯ನೇ ಶತಮಾನಗಳಲ್ಲಿ ಸಾಲಗಾರರಾಗಿದ್ದ ದೇಶಗಳು ಬೇರೆ ದೇಶಗಳಿಗೆ ಸಾಲ ನೀಡುವ ಶಕ್ತಿ ಪಡೆದಿವೆ. ವಿದೇಶಿ ನೆರವಿನ ಜೊತೆಗೆ ತಂತ್ರಜ್ಞಾನ, ಉತ್ಪಾದನಾ ನೈಪುಣ್ಯತೆ,

ಯಂತ್ರೋಪಕರಣಗಳು ಹಾಗೂ ಮತ್ತಿತರ ನೆರವುಗಳೂ ವಿದೇಶಿ ಬಂಡವಾಳವು ಹಿಂದುಳಿದ ಬಡ ರಾಷ್ಟ್ರಗಳಲಂತೂ ತುಂಬ ಮಹತ್ವದ ಪಾತ್ರವನ್ನು ವಹಿಸುತ್ತಿದೆ.

ವಿದೇಶಿ ಬಂಡವಾಳ ಅಥವಾ ನೆರವು ಹಿಂದುಳಿದ ದೇಶಗಳ ಆರ್ಥಿಕಾಭಿವೃದ್ಧಿಯಲ್ಲಿ ಮಹತ್ತರ ಪಾತ್ರ ವಹಿಸುತ್ತಿದೆ. ಬಡತನ, ನಿರುದ್ಯೋಗ, ಮುಂತಾದ ಜ್ವಲಂತಿ ಸಮಸ್ಯೆಗಳನ್ನು ಎಂದುರಿಸುತ್ತಿರುವ ಈ ದೇಶಗಳಲ್ಲಿ ವಿದೇಶಿ ಬಂಡವಾಗಳ ಆರ್ಥಿಕಾಭಿವೃದ್ಧಿಯ ಜೀವಾಳವಾಗಬಲ್ಲದು. ಬಂಡವಾಳ ಕೊರತೆಯನ್ನು ಅನುಭವಿಸುತ್ತಿರುವ ಈ ದೇಶಗಳಲ್ಲಿ ವಿದೇಶಿ ಬಂಡವಾಳ ಪ್ರಗತಿಯ ಯಂತ್ರವಾಗಬಲ್ಲದು. ವಿವಿಧ ಕ್ಷೇತ್ರಗಳಲ್ಲಿ ಈ ಬಂಡವಾಳ ವಹಿಸುವ ಪಾತ್ರವನ್ನು ತುಂಬ ಮಹತ್ವದ್ದಾಗಿದೆ. ದೇಶದಲ್ಲಿ ಕೈಗಾರಿಕೆಗಳು ಮತ್ತು ಆರ್ಥಿಕ ವ್ಯವಸ್ಥೆಯ ಅಭಿವೃದ್ಧಿಗೆ ಬಂಡವಾಳ ಮಾರುಕಟ್ಟೆಯು ಕೈಗಾರಿಕೆಗಳಿಗೆ ಅಗತ್ಯವಿರುವ ಹಣಕಾಸನ್ನು ಒದಗಿಸುವ ಮಾರುಕಟ್ಟೆಯಾಗಿದೆ.

ಸ್ವತಂತ್ರ ಪೂರ್ವ ಭಾರತದಲ್ಲಿ ಬಂಡವಾಳ ಮಾರುಕಟ್ಟೆಯು ಅಭಿವೃದ್ಧಿಯನ್ನು ಹೊಂದಲು ಅರಂಭಿಸಿತು. "ಭಾರತೀಯ ನಾಯಕರು ಸ್ವಾತಂತ್ರ್ಯ ಪೂರ್ವದಿಂದಲೇ ವಿದೇಶಿ ವ್ಯಾಪಾರ ಕುರಿತಂತೆ ಮುಕ್ತಮನಸ್ಸುಳ್ಳವರಾಗಿದ್ದು. ತೆರೆದ ಆರ್ಥಿಕತೆ ಹೊಂದುವಂತೆ ನೆಹರೂ ಅಧ್ಯಕ್ಷರಾಗಿದ್ದ ರಾಷ್ಟ್ರೀಯ ಯೋಜನಾ ಸಮಿತಿ ವರದಿಯಲ್ಲಿ ಅಭಿವ್ಯಕ್ತಗೊಂಡಿದೆ. (೧೯೩೮) ಈ ಸಮಿತಿ ತಳೆದಿರುವ ಅಭಿಪ್ರಾಯ ಹೀಗೆ ವ್ಯಕ್ತಪಡಿಸಿದೆ. ಆಧುನಿಕ ವಿಶ್ವದ ಸಂದರ್ಭದಲ್ಲಿ, ಯಾವುದೇ ದೇಶವು ಅಂತಾರಾಷ್ಟ್ರೀಯ ಅಂತರ ಸಂಬಂಧದ ಚೌಕಟ್ಟಿನೊಳಗೆ ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಸ್ವತಂತ್ರವಾಗಿರುವುದು ಅಸಾದ್ಯ," ಹಾಗೊಂದು ವೇಳೆ ಸ್ವತಂತ್ರವಾಗಿರಬೇಕಾದರೆ ಅದು ಅಧಿಕವಾಗಿ ಕೈಗಾರಿಕೇಂದ್ರಿಕೃತಗೊಂಡಿರಬೇಕು ಮತ್ತು ತನ್ನ ಶಕ್ತಿ ಸಂಪನ್ಮೂಲಗಳನ್ನು ಚೆನ್ನಾಗಿ ಅಭಿವೃದ್ಧಿಪಡಿಸಿರಬೇಕು. ಅಲ್ಲದೆ ದೇಶವೊಂದು ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿ ಅತ್ಯಾಧುನಿಕ ತಂತ್ರಜ್ಞಾನದ ನೆರವಿಲ್ಲದೆ ಬಡತನವನ್ನು ನಿರ್ಮೂಲನೆ ಗೊಳಿಸಲಾಗದು ಮತ್ತು ಅತ್ಯಧಿಕವಾಗಿ ಜೀವನಮಟ್ಟಗಳನ್ನು ಸಾಧಿಸಲಾಗದು. ಕೈಗಾರಿಕಾ ಹಿಂದುಳಿದ ದೇಶವೊಂದು ವಿಶ್ವದ ಸಮತೋಲನವನ್ನು ನಿರಂತರವಾಗಿ ಬುಡಮೇಲು ಮಾಡುತ್ತದೆ. ಮತ್ತು ಅದು ಅಭಿವೃದ್ಧಿ ದೇಶಗಳು ಆಕ್ರಮಣಕಾರಿ ನಿಲುವುಗಳನ್ನು ತಳೆಯಲು ಕಾರಣವಾಗುತ್ತದೆ. ಒಂದು ವೇಳೆ ದೇಶವೊಂದು ತನ್ನ ರಾಜಕೀಯ ಸ್ವತಂತ್ರ್ಯವನ್ನು ಉಳಿಸಿಕೊಂಡರೂ. ಅದು ಕೇವಲ ಔಪಚಾರಿಕವಾಗಿರುತ್ತದೆ. ಮತ್ತು ಆರ್ಥಿಕ ನಿಯಂತ್ರಣವು ಇತರೆಡೆಗಳಿಗೆಲ್ಲಾ ಪ್ರಸರಣಗೊಳ್ಳತ್ತದೆ. ಅಂದು ಭಾರತದ ಉದ್ದೇಶವು ರಾಷ್ಟ್ರೀಯ ಸ್ವಾವಲಂಬನೆ ಸಾಧಿಸುವುದಾಗಿತ್ತು. ಅಂತರಾಷ್ಟ್ರೀಯ ವ್ಯಾಪಾರವನ್ನು ಹೊರತು ಪಡಿಸದಿದ್ದರೂ ಭಾರತವು ಆರ್ಥಿಕ ಸಾಮ್ರಾಜ್ಯವಾದೆಡೆಗೆ ನೂಕಲ್ಪಡುವುದು ........ ಇಷ್ಟವಿರಲಿಲ್ಲ. ಹೀಗಾಗಿ ಕೇಂದ್ರ ಸರ್ಕಾರವು ಆರ್ಥಿಕ ಯೋಜನೆಯ ಪ್ರಾರಂಭದಿಂದಲೇ (೧೯೫೧) ಅದೊಂದು

ಬಗೆಯ ವಾಣಿಜ್ಯ ಸಂರಕ್ಷಣಾ ನೀತಿಯನ್ನು ಅನುಸರಿಸಿತು. ಈ ಬಗೆಗೆ ಪ್ರಥಮ ಪಂಚಾವಾರ್ಷಿಕ ಯೋಜನೆಯಡಿನಲ್ಲಿ ಹೀಗೆ ಹೇಳಲಾಗಿದೆ. "ರಫ್ತುಗಳು ಮತ್ತು ಆಮದುಗಳ ನಿಯಂತ್ರಣವು ಮತ್ತು ಕೆಲವು ಸರಕುಗಳ ಸರ್ಕಾರಿ ವಾಣಿಜ್ಯವು ಎರಡು ದೃಷ್ಟಿಗಳಿಂದ ಅಗತ್ಯ. ಒಂದು ಲಭ್ಯವಿರುವ ಸೀಮಿತವಾದ ವಿದೇಶಿ ವಿನಿಮಯವನ್ನು ಅತ್ಯುತ್ತಮವಾಗಿ ಬಳಸುವುದು ಮತ್ತು ಎರಡು ಯೋಜನೆಯಲ್ಲಿ ಗುರಿಗಳನ್ನು ವ್ಯಾಖ್ಯಾನಿಸಿದ ಪ್ರಕಾರ ದೇಶದ ಉತ್ಪಾದಕ ಸಂಪೂರ್ನ್ಮೂಲಗಳನ್ನು ಬಳಸುವುದು. ಆದ್ದರಿಂದ ೧೯೫೦ರ ದಶಕದ ಮಧ್ಯಭಾಗದಿಂದಲೇ ಉತ್ಪಾದನೆ, ಹೂಡಿಕೆ, ತಂತ್ರಜ್ಞಾನ ಮತ್ತು ಸ್ಥಾನೀಕರಣ ಆಯ್ಕೆ ಬೆಲೆಗಳು ಮತ್ತು ವಿದೇಶಿ ವ್ಯಾಪಾರದ ಮೇಲೆ ವ್ಯಾಪಕವಾದ ಸರ್ಕಾರಿ ನಿಯಂತ್ರಣ ವ್ಯವಸ್ಥೆಯನ್ನು ಜಾರಿಗೊಳಿಸಲಾಯಿತು. ಹೀಗೆ ಸ್ವಾತಂತ್ರ್ಯ ನಂತರದ ಯೋಜನಾವಧಿಯಲ್ಲಿ ಭಾರತವು ಸ್ಪಷ್ಟವಾದ ವಿದೇಶಿ ವ್ಯಾಪಾರ ನೀತಿ ಹೊಂದುವುದು ಸಾಧ್ಯವಾಯಿತು."[೩] ಬಂಡವಾಳಶಾಹಿಗಳ ಪ್ರವೇಶ ಈ ರೀತಿಯಾಗಿರುವುದನ್ನು ನಾವು ನಾವು ಕಾಣಬಹುದಾಗಿದೆ.

ಈ ಮೇಲಿನ ಎಲ್ಲ ವಿವರವನ್ನು ಹೇಳಿದಂತೆ ಈ ರೀತಿಯಾಗಿ ಬಂಡವಾಳದ ಪ್ರಭಾವ ಬೀರಿ ಇತರೆ ಕಸುಬುಗಳು ನಾಶವಾಗುತ್ತವೆ. ಮತ್ತು ಈ ಕಸಬುಗಳನ್ನು ಮುಂದುವರೆಸಿಕೊಂಡು ಹೋಗಲು ಅಸಾಧ್ಯವಾಗುತ್ತಿದೆ. ಸ್ವತಂತ್ರ್ಯವಾದ ಸಂಧರ್ಭದಲ್ಲಿ ನಮ್ಮ ಭಾರತ ದೇಶದಲ್ಲಿ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳು ಸೇರಿದಂತೆ ಇನ್ನು ಹಲವಾರು ಹಿಂದುಳಿದಿದ್ದವು.

ಪಂಡಿತ ಜವಹರಲಾಲ ನೆಹರೂ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿ ಬಂಡವಾಳಶಾಹಿಗಳ ಪ್ರವೇಶ ಪ್ರಾರಂಭವಾಗುತ್ತದೆ. ಹಿಂದಿನ ಸರ್ಕಾರವು ಬಂಡವಾಳ ಶಾಹಿಗಳಗೆ ಪೂರಕವಾಗಿ ಎಲ್ಲವನ್ನು ಸಹಕರಿಸಿತ್ತು. ಆಗಿನಿಂದ ಒಂದೊಂದು ವಿಸ್ತರಿಸಿಕೊಂಡು ಇಂದು ದೇಶದಲ್ಲಿ ಯಾವೊಬ್ಬ ವ್ಯಕ್ತಿಗಳು ತಮ್ಮ ಮೂಲ ಕಸುಬುಗಳನ್ನು ಮುಂದುವರೆಸಲು ಸಾಧ್ಯವಾಗುತ್ತಿಲ್ಲ. ಈ ಬಂಡವಾಳಶಾಹಿಗಳ ಪ್ರಭಾವದಿಂದ ದೇಶದಲ್ಲಿ ದೊಡ್ಡ ದೊಡ್ಡ ಪ್ರಮಾಣದಲ್ಲಿ ಕಂಪನಿಗಳಿಂದ ಎಲ್ಲ ವಸ್ತುಗಳನ್ನು ತಯಾರಿಸಿ ಮಾರುಕಟ್ಟೆಗೆ ಸರಬರಾಜು ಮಾಡುತ್ತದೆ. ಇದರಿಂದ ಸಣ್ಣಪುಟ್ಟ ಅಂಗಡಿಯುಳ್ಳ ರೈತಾಪಿ ವರ್ಗಕ್ಕೆ ಇನ್ನಿತರೆ ವರ್ಗದವರಿಗೆ ಹಲವಾರು ಪರಿಣಾಮಗಳು ಉಂಟಾಗುತ್ತದೆ. ಅಷ್ಟೆ ಅಲ್ಲದೇ ಅವುಗಳನ್ನು ರಕ್ಷಿಸಲು ಇನ್ನೂ ಸಾಧ್ಯವಾಗುತ್ತಿಲ್ಲ. ಮತ್ತು ಅವುಗಳ ಮೂಲ ಕಸುಬುಗಳನ್ನು ಕಾಪಾಡಲು ಇಂದು ಸಾದ್ಯವಾಗುತ್ತಿಲ್ಲ. ಹೀಗೆ ಬಂಡವಾಳಶಾಹಿಗಳ ಪ್ರವೇಶದಿಂದ ಅನೇಕ ತೊಂದರೆಗಳು ಉಂಟಾದರೆ ಇನ್ನೊಂದಡೆ ಅಭಿವೃದ್ಧಿಗೆ ಪೂರಕವಾಗಿದೆ ಎಂದು ಹೇಳುವುದರಲ್ಲಿ ಸಂದೇಶವಿಲ್ಲ.

## ೪.೪. ಪರ್ಯಾಯ ಕಸುಬಿನ ಅವಲಂಬನೆ

೧. ಬಟ್ಟೆಗಳಿಗೆ ಚಿತ್ರಗಳನ್ನು ಹಾಕುವುದು.

೨. ಅನ್ನ ಮುಚ್ಚುವ ಬಟ್ಟೆಗಳ ಮೇಲೆ ಚಿತ್ರಗಳನ್ನು ಬಿಡಿಸುವುದು.

೩. ಸೀರೆಗಳ ಮೇಲೆ ಚಿತ್ರಗಳನ್ನು ಹಾಕುವುದು.

೪. ಸೀರೆಗಳಿಗೆ ಕುಚ್ಚು ಹಾಕುವುದು.

೫. ಟೇಬಲ್ ಮೇಲೆ ಹಾಕುವ ಬಟ್ಟೆಗೆ ಚಿತ್ರ ಹಾಕುವುದು.

೬. ಪೋನ್ ಮೇಲೆ ಹಾಕುವ ಬಟ್ಟೆಗೆ ಚಿತ್ರ ಬಿಡಿಸುವುದು.

೭. ಕಾಟನ್ ಬಟ್ಟೆಗೆ ವಿವಿಧ ಚಿತ್ರಗಳನ್ನು ಬಿಡಿಸುವುದು.

೮. ಟಿ.ವಿ. ಮೇಲೆ ಹಾಕುವ ಬಟ್ಟೆಗೆ ಚಿತ್ರ ಬಿಡಿಸುವುದು.

೯. ಸೋಫಾ ಮೇಲೆ ಹಾಕುವ ಬಟ್ಟೆಗೆ ಚಿತ್ರ ಹಾಕುವುದು.

೧೦. ನೆಲಕ್ಕೆ ಹಾಕುವ ಬಟ್ಟೆಗೆ ಚಿತ್ರ ಹಾಕುವುದು.

೧೧. ಪ್ಲಾಸ್ಟಿಕ್ ಬುಟ್ಟಿ ಮೇಲೆ ಚಿತ್ರ ಬಿಡಿಸುವುದು.

೧೨. ಹೂ ಕುಂಡಗಳ ಮೇಲೆ ಚಿತ್ರ ಬಿಡಿಸುವುದು.

೧೩. ಟಿಫಿನ್ ಬಾಕ್ಸ ಮೇಲೆ ಚಿತ್ರ ಬಿಡಿಸುವುದು.

೧೪. ಪ್ಲಾಸ್ಟಿಕ್ ಬಳೆ ಮೇಲೆ ಚಿತ್ರ ಬಿಡಿಸುವುದು.

೧೫. ಉಲನ್ ಬಾಸ್ಕೇಟ್ ಮೇಲೆ ಚಿತ್ರ ಬಿಡಿಸುವುದು.

೧೬. ಸುಟ್ಟ ಲೈಟ್‌ಗೆ ಚಿತ್ರ ಬಿಡಿಸುವುದು.

೧೭. ಮಣಿಗಳಿಂದ ಹೂ ಆಕಾರ ಮಾಡುವುದು.

೧೮. ಮೀನಿನ ಆಕಾರದಲ್ಲಿ (ಚಿತ್ರ) ಹಾಕುವುದು.

೧೯. ನವಿಲು ಆಕಾರ ಗುಂಡುಪೀನ್ ಹಾಕಿ, ಅದಕ್ಕೆ ಚಿತ್ರ ಬಿಡಿಸುವುದು.

೧. ಬಟ್ಟೆಗಳಿಗೆ ಚಿತ್ರಗಳನ್ನು ಹಾಕುವುದು: ಬಟ್ಟೆಗಳಿಗೆ ಹಾಕುವುದರಿಂದ ತುಂಬ ಆಕರ್ಷಕವಾಗುವಂತೆ ಮಾಡುವುದು. ಈ ರೀತಿ ಆಕರ್ಷಕವಾದ ತುಂಬ ಜಿನ ಬಟ್ಟೆಗಳನ್ನು ಕೊಂಡುಕೊಳ್ಳುತ್ತಾರೆ. ಈ ಬಟ್ಟೆಗಳಿಗೆ ಬೇಡಿಕೆಯು ಹೆಚ್ಚಾಗಿರುತ್ತದೆ. ಮಾರುಕಟ್ಟೆಯಲ್ಲಿ ಇವು ತುಂಬ ವ್ಯಾಪಾರವಾಗುತ್ತವೆ.

೨. ಅನ್ನ ಮುಚ್ಚುವ ಬಟ್ಟೆಗಳ ಮೇಲೆ ಚಿತ್ರಗಳನ್ನು ಬೀಡಿಸುವುದು : ಈ ರೀತಿಯಾಗಿ ಬಟ್ಟೆಗಳಿಗೆ ಮಾರುಕಟ್ಟೆಯಲ್ಲಿ ಜನರು ಹೆಚ್ಚಾಗಿ ಖರೀದಿಸುತ್ತಾರೆ. ಈ ಬಟ್ಟೆಗಳನ್ನು ಮುಸ್ಲಿಂ ಸಮುದಾಯದವರು ಮತ್ತು ಪಿಂಜಾರ ಸಮುದಾಯದವರು ಉಪಯೋಗಿಸುತ್ತಾರೆ. ಈ ರೀತಿ ಬಟ್ಟೆಗಳನ್ನು ಉಪಯೋಗಿಸುವುದರಿಂದ ತಿಂಡಿ, ತಿನಿಸುಗಳು ಮತ್ತು ಅನ್ನ ಸ್ವಚ್ಛವಾಗಿರಬಹುದು.

೩. ಸೀರೆಗಳ ಮೇಲೆ ಚಿತ್ರಗಳನ್ನು ಹಾಕುವುದು: ಸೀರೆಗಳ ಮೇಲೆ ಚಿತ್ರಗಳನ್ನು ಹಾಕುವುದರಿಂದ ಮಹಿಳೆಯರು ಹೆಚ್ಚಾಗಿ ಇಷ್ಟಪಟ್ಟು ಸೀರೆಗಳನ್ನು ಹೆಚ್ಚಾಗಿ ಖರೀದಿಸುತ್ತಾರೆ. ಇಂದು ಮಾರುಕಟ್ಟೆಯಲ್ಲಿ ಇಂತಹ ಸೀರೆಗಳಿಗೆ ಹೆಚ್ಚಾಗಿ ಬೆಲೆಯಿದೆ. ಮತ್ತು ಮಾರಾಟ ಸಹ ಹೆಚ್ಚಾಗಿ ಆಗುತ್ತವೆ. ಇಂದು ಇಂತಹ ಸೀರೆಗಳನ್ನೆ ಮಹಿಳೆಯರು ಇಷ್ಟಪಡುತ್ತಾರೆಂದು ಹೇಳಬಹುದು.

೪. ಸೀರೆಗಳಿಗೆ ಕುಚ್ಚು ಹಾಕುವುದು : ಸೀರೆಗಳಿಗೆ ಕುಚ್ಚು ಹಾಕುವುದರಿಂದ ದೇಹದ ರಕ್ಷಣೆಯನ್ನು ಹೆಚ್ಚಾಗಿ ಪಡೆಯಬಹುದು. ಇವುಗಳಿಂದ ಸೀರೆಗೆ ಪುಷ್ಟಿ ದೊರೆಯುವಂತೆ ಆಗುತ್ತದೆ. ಇಂದು ಹೆಚ್ಚಾಗಿ ಸೀರೆಗಳಿಗೆ ಕುಚ್ಚನ್ನು ಹಾಕಿಸುತ್ತಾರೆ. ಇದಕ್ಕೆ ಹೆಚ್ಚು ಬೇಡಿಕೆಯಿದೆ ಎಂದು ಹೇಳಬಹುದು.

೫. ಟೇಬಲ್ ಮೇಲೆ ಹಾಕುವ ಬಟ್ಟೆಗೆ ಚಿತ್ರ ಹಾಕವುದು: ಇಂದು ಟೇಬಲ್ ಮೇಲೆ ಹಾಕುವ ಬಟ್ಟೆಗಳಿಗೆ ಹೆಚ್ಚಾಗಿ ಚಿತ್ರಗಳನ್ನು ಬಿಡಿಸುತ್ತಾರೆ. ಇಂತಹ ಬಟ್ಟೆಗಳಿಗೆ ಬೇಡಿಕೆಯು ಜಾಸ್ತಿಯಿದೆ. ಕೆಲವೊಂದು ಕಾರ್ಯಾಲಯಗಳಲ್ಲಿ ಮತ್ತು ಮನೆಗಳಲ್ಲಿ ಕಂಡುಬಂದಿರುವಂತೆ ಟೇಬಲ್ ಮೇಲೆ ಹಾಕುವ ಬಟ್ಟೆಗಳಿಗೆ ಚಿತ್ರಗಳನ್ನು ಹಾಕಿರುತ್ತಾರೆ. ಮತ್ತು ಇಂತಹ ಬಟ್ಟೆಗಳಿಗೆ ಬೇಡಿಕೆಯು ಹೆಚ್ಚಾಗಿರುತ್ತದೆ.

೬. ಮೊಬೈಲ್ ಪೋನ್ ಮೇಲೆ ಹಾಕುವ ಬಟ್ಟೆಗಳಿಗೆ ಹೆಚ್ಚಿನ ಬೇಡಿಕೆಯಲ್ಲಿ ಅವುಗಳಿಗೆ ಚಿತ್ರಗಳನ್ನು ಹಾಕುವುದರಿಂದ ಇದನ್ನು ಹೆಚ್ಚು ಹೆಚ್ಚು ಮಾರಾಟವಾಗತೊಡಗುತ್ತವೆ. ಅವುಗಳಿಗೆ ಮುಖ್ಯವಾಗಿ ಚಿತ್ರಗಳೇ ಹೆಚ್ಚಾಗಿ ಇರುವುದರಿಂದ ಅವುಗಳಿಗೆ ಮಾರುಕಟ್ಟೆಯಲ್ಲಿ ಬೇಡಿಕೆಯು ತುಂಬಯಿದೆ. ಇಂದು ಕಾಟನ್ ಬಟ್ಟೆಗಳನ್ನೇ ಹೆಚ್ಚಾಗಿ ಉಪಯೋಗಿಸುವವರು ಇದ್ದಾರೆ.

೭. ಕಾಟನ್ ಬಟ್ಟೆಗೆ ವಿವಿಧ ಚಿತ್ರಗಳನ್ನು ಬಿಡಿಸುವುದು: ಇಂದು ಮಾರುಕಟ್ಟೆಯಲ್ಲಿ ಕಾಟನ್ ಬಟ್ಟೆಗಳಿಗೆ ಹೆಚ್ಚಿನ ಬೇಡಿಕೆಯಿದ್ದು, ಅವುಗಳಿಗೆ ಚಿತ್ರಗಳನ್ನು ಹಾಕುವುದರಿಂದ ಇನ್ನು ಹೆಚ್ಚು ಹೆಚ್ಚು ಮಾರಾಟವಾಗತೊಡಗುತ್ತವೆ. ಅವುಗಳಿಗೆ ಮುಖ್ಯವಾಗಿ ಚಿತ್ರಗಳೇ ಹೆಚ್ಚಾಗಿ ಇರುವುದರಿಂದ ಅವುಗಳಿಗೆ ಮಾರುಕಟ್ಟೆಯಲ್ಲಿ ಬೇಡಿಕೆಯು ತುಂಬಯಿದೆ. ಇಂದು ಕಾಟನ್ ಬಟ್ಟೆಗಳನ್ನೇ ಹೆಚ್ಚಾಗಿ ಉಪಯೋಗಿಸುವವರು ಇದ್ದಾರೆ.

೮. ಟಿ.ವಿ. ಮೇಲೆ ಹಾಕುವ ಬಟ್ಟೆಗೆ ಚಿತ್ರ ಬಿಡಿಸುವುದು: ಇಂದು ಪ್ರತಿಯೊಂದು ಹಳ್ಳಿ ಹಳ್ಳಿಯಲ್ಲಿ ಮತ್ತು ಮನೆ ಮನೆಗಳಲ್ಲಿ ಟಿ.ವಿ.ಯನ್ನು ನಾವು ಕಾಣಬಹುದಾಗಿದೆ. ಅಲಂಕಾರಿಕ ವಸ್ತುಗಳಾದ ಬಟ್ಟೆಯನ್ನು ಉಪಯೋಗಿಸುತ್ತಾರೆ. ಟಿ.ವಿ.ಗೆ ಬಟ್ಟೆಯನ್ನು

ಹಾಕುವುದರಿಂದ ದುಳನ್ನು ತಡೆಯಬಹುದು. ಮತ್ತು ಟಿ.ವಿ. ಯನ್ನು ಆಕರ್ಷಣೀಯವಾಗಿ ಕಾಣಬಹುದು. ಈ ಎರಡು ಉಪಯೋಗಗಳು ಆಗುತ್ತವೆ.

೯. ಸೋಫಾ ಮೇಲೆ ಹಾಕುವ ಬಟ್ಟೆಗೆ ಚಿತ್ರ ಹಾಕುವುದು: ಸೋಫಾಗಳ ಮೇಲೆ ಹಾಕಿರುವ ಬಟ್ಟೆಗೆ ಇಂದು ಹೆಚ್ಚಾಗಿ ಚಿತ್ರಗಳನ್ನು ಕಾಣಬಹುದಾಗಿದೆ. ಸೋಫಾಗಳ ಮೇಲೆ ಚಿತ್ರಗಳನ್ನು ಹಾಕಿರುವುದರಿಂದ ಹೆಚ್ಚಾಗಿ ಮಾರಾಟವಾಗುತ್ತವೆ. ಮತ್ತು ಅವುಗಳ ಬೆಲೆಯನ್ನು ಸಹ ನಾವು ಮಾಡಬಹುದಾಗಿದೆ. ಈ ಚಿತ್ರಗಳಿಂದಲೇ ಅದರ ಬೆಲೆಯು ಪ್ರಮುಖವಾಗಿ ಕಾಣುತ್ತದೆ. ಮತ್ತು ಇವುಗಳ ಮಾರಾಟ ಸಹ ಹೆಚ್ಚಾಗಿ ಆಗುತ್ತವೆ.

೧೦. ನೆಲಕ್ಕೆ ಹಾಕುವ ಬಟ್ಟೆಗೆ ಚಿತ್ರ ಹಾಕುವುದು: ನೆಲಕ್ಕೆ ಹಾಕುವ ಬಟ್ಟೆಗೆ ಇಂದು ಹೆಚ್ಚು ಬೇಡಿಕೆಯಿದೆ. ಅವುಗಳಿಗೆ ಈ ಚಿತ್ರಗಳಿಂದಲೇ ಶೋಭೆ ತರತ್ತವೆ. ಈ ಬಟ್ಟೆಗಳಿಗೆ ಮಾರುಕಟ್ಟೆಯಲ್ಲಿ ಹೆಚ್ಚು ಬೇಡಿಕೆಯಿದೆ. ಮದುವೆ ಸಮಾರಂಬಗಳಿಗೆ ಇವುಗಳನ್ನು ಉಪಯೋಗಿಸುತ್ತಾರೆ. ನೆಲಕ್ಕೆ ಹಾಸುವ ಬಟ್ಟೆಗಳಿಗೆ ಚಿತ್ರಗಳನ್ನು ಹಾಕಿರುವುದರಿಂದ ಅವುಗಳ ಬೆಲೆಯು ಹೆಚ್ಚಾಗಿ ಆಗಿರುತ್ತದೆ.

೧೧. ಪ್ಲಾಸ್ಟಿಕ್ ಬುಟ್ಟಿ ಹಾಕುವುದು: ಮಾರುಕಟ್ಟೆಯಲ್ಲಿ ಪ್ಲಾಸ್ಟಿಕ್ ಬುಟ್ಟಿಗೆ ಹೆಚ್ಚು ಬೇಡಿಕೆಯಿದ್ದು, ಇದನ್ನು ಕಾಯಿಪಲ್ಲೆ, ತರಲು ಕಿರಾಣಿ ಸಾಮಾನು ತರಲು, ವಿವಿಧ ರೀತಿಯ ಸಾಮಾನುಗಳನ್ನು ತರಲು ಉಪಯೋಗಿಸುತ್ತಾರೆ. ಈ ಪ್ಲಾಸ್ಟಿಕ್ ಬುಟ್ಟಿಯು ಹೆಚ್ಚು ಬೆಲೆಯುಳ್ಳದ್ದಾಗಿದ್ದು, ಇದನ್ನು ಮಹಿಳೆಯರು ಮಾತ್ರ ತಯಾರಿಸುತ್ತಾರೆ. ಇದು ಮಾರುಕಟ್ಟೆಯಲ್ಲಿ ದುಬಾರಿ ಬೆಲೆಗೆ ಸಿಗುತ್ತದೆ.

೧೨. ಹೂ ಕುಂಡಗಳ ಮೇಲೆ ಚಿತ್ರ ಬಿಡಿಸುವುದು: ಹೂ-ಕುಂಡಗಳ ಇಂದು ಕಾರ್ಯಾಲಯಗಳಲ್ಲಿ ಮತ್ತು ವಸತಿ ನಿಲಯಗಳಲ್ಲಿ ಶಾಲಾ, ಕಾಲೇಜುಗಳಲ್ಲಿ, ಹೋಟೆಲ್‌ಗಳಲ್ಲಿ ಆಕರ್ಷಕರನ್ನಾಗಿ ಮಾಡುವುದಲ್ಲದೇ ಹೆಚ್ಚಾಗಿ ಮಾರಾಟವಾಗುವ ರೀತಿಯಲ್ಲಿ ನೋಡಿಕೊಳ್ಳಬಹುದು. ಹೂಕುಂಡಗಳು ಮಾರುಕಟ್ಟೆಯಲ್ಲಿ ದುಬಾರಿ ಬೆಲೆಯಲ್ಲಿ ಸಿಗುತ್ತವೆ.

೧೩. ಟಿಫಿನ್ ಬಾಕ್ಸ್ ಚಿತ್ರ ಹಾಕುವುದು: ಆಧುನಿಕ ಯುಗದಲ್ಲಿ ಇಂದು ಅನೇಕ ವಸ್ತುಗಳಿಗೆ ಚಿತ್ರಗಳನ್ನು ಹಾಕುತ್ತಾರೆ. ಕಾರಣ ಅವುಗಳನ್ನು ಹೆಚ್ಚಾಗಿ ಮಾರಾಟ ಮಾಡಬೇಕೆಂಬ ಆಸೆಯಿಂದ ಈ ದಾರಿಯನ್ನು ಕಂಡುಕೊಂಡಿದ್ದಾರೆ. ಟಿಫನ್ ಬಾಕ್ಸ್‌ಗೆ ಚಿತ್ರವನ್ನು ಹಾಕುವುದರಿಂದ ಇದರ ಬೆಲೆ ದುಪ್ಪಟ್ಟು ಮಾರಾಟ ಮಾಡಬಹುದು. ಮತ್ತು ಹೆಚ್ಚಾಗಿ ಮಾರಾಟವಾಗುವ ರೀತಿಯಲ್ಲಿ ಮಾಡಬಹುದಾಗಿದೆ.

೧೪. ಪ್ಲಾಸ್ಟಿಕ್ ಬಳೆ ಹಾಕುವುದು: ಪ್ಲಾಸ್ಟಿಕ್ ಬಳೆಯು ಇಂದು ಹಲವಾರು ಸ್ಥಳದಲ್ಲಿ ನಾವು ಕಾಣಬಹುದಾಗಿದೆ. ಹೆಚ್ಚಾಗಿ ಜಾತ್ರೆಗಳಲ್ಲಿ ಮಾರಾಟ ಮಾಡುತ್ತಾರೆ. ಇವುಗಳನ್ನು

ಗಂಡುಮಕ್ಕಳು ಮತ್ತು ಹೆಣ್ಣು ಮಕ್ಕಳು ಉಪಯೊಗಿಸುತ್ತಾರೆ. ಈ ಪ್ಲಾಸ್ಟಿಕ್ ಬಳೆಗಳಿಗೆ ಎಲ್ಲಿಲ್ಲದ ಬೇಡಿಕೆಯಿದೆ. ಪಟ್ಟಣಗಳಲ್ಲಿ ಈ ಬಳೆಗಳನ್ನು ಒಂದು ಫ್ಯಾಶನ್ ರೂಪದಲ್ಲಿ ಧನಿಸುತ್ತಾರೆ. ಯುವಕರಂತು ತುಂಬ ಉಪಯೋಗಿಸಿತ್ತು.

೧೫. ಉಲನ್ ಬಾಸ್ಕೇಟ್ ಹಾಕುವುದು: ಉಲನ್ ಬಾಸ್ಕೇಟ್ ಹಾಕುವುದು ಒಂದು ಕಲೆಯು ಆಗಿರುವುದರಿಂದ ಇದಕ್ಕೆ ಮಾರುಕಟ್ಟೆಯಲ್ಲಿ ಬೇಡಿಕೆ ಹೆಚ್ಚು. ಆದರೆ ಇದನ್ನು ನಾವು ಶ್ರೀಮಂತರ ಕುಟುಂಬಗಳಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಉಲನ್ ಬಾಸ್ಕೆಟ್ ಮಾರುಕಟ್ಟೆಯಲ್ಲಿ ತುಂಬ ದುಬಾರಿ ಬೆಲೆಯಲ್ಲಿ ಸಿಗುತ್ತದೆ. ಇದಕ್ಕೆ ತಯಾರಿಸುವ ವಿಧಾನಗಳು ಸಹ ತುಟ್ಟಿಯಲ್ಲಿ ಸಿಗುವುದರಿಂದ ಅಷ್ಟೇ ದುಬಾರಿ ಬೆಲೆಗೆ ಮಾರಾಟವಾಗುತ್ತದೆ ಎಂದು ಹೇಳಬಹುದು. ಇದನ್ನು ಮನೆಗಳಲ್ಲಿ ಮಹಿಳೆಯ ಹಾಕುವುದು ಮತ್ತು ಯತೀಯರು ಹಾಗೂ ಅಜ್ಜಿಯದು ಹಾಕುತ್ತಾರೆ. ಒಟ್ಟಿನಲ್ಲಿ ಇದನ್ನು ಪಿಂಜಾರರು ಉಪ ಕಸುಬನ್ನು ಮಾಡಿಕೊಂಡಿದ್ದಾರೆ.

೧೬: ಸುಟ್ಟ ಲೈಟ್‌ಗೆ ಚಿತ್ರ ಬಿಡಿಸುವುದು: ಇಂದು ನಿಸರ್ಗದಲ್ಲಿ ಯಾವ ವಸ್ತುಗಳು ಸಹ ಕೆಲಸಕ್ಕೆ ಬರುವುದಿಲ್ಲ ಎಂದು ಬರುವುದಿಲ್ಲ. ಯಾಕೆಂದರೆ ಪ್ರತಿಯೊಂದು ವಸ್ತು ನಿಸರ್ಗದಲ್ಲಿ ಉಪಯೋಗಕ್ಕೆ ಬರುತ್ತದೆ. ಇಂದು ಮಾರುಕಟ್ಟೆಯಲ್ಲಿ ಸುಟ್ಟ ಲೈಟ್ ಸಹ ತುಂಬ ಬೆಲೆಯುಳ್ಳದಾಗಿದೆ. ಅದಕ್ಕೆ ತಕ್ಕಂತೆ ಚಿತ್ರ ಹಾಕಿ ಮಹಿಳೆಯರು ಇಂದು ಮಾರುಕಟ್ಟೆಗೆ ಕಳುಹಿಸುತ್ತಾರೆ. ಮಾರುಕಟ್ಟೆಯಲ್ಲಿ ಈ ಲೈಟನ್ನು ಪ್ಯಾಶನ್ ವಸ್ತುವಾಗಿ ಬಳಸಿ ಅದನ್ನು ದುಬಾರಿ ಬೆಲೆಗೆ ಮಾಡುತ್ತಾರೆ. 

೧೭. ಮಣಿಗಳಿಂದ ಹೂ–ಆಕಾರ ಮಾಡುವುದು: ಸಮಾಜದಲ್ಲಿ ಇಂದು ಪ್ರತಿಯೊಂದು ವಸ್ತುಗಳು ಸಹ ಉಪಯೋಗ ಬರುತ್ತವೆ. ಒಡೆದ ಮಣಿಗಳು ಸಹ ಇಂದು ಮಾರುಕಟ್ಟೆಯಲ್ಲಿ ಒಳ್ಳೆಯಯಿದೆ. ಮಣಿಗಳಿಂದ ಅಲಂಕಾರಿಕ ವಸ್ತುಗಳನ್ನಾಗಿ ಮಾಡಿ ಮನೆಗಳಲ್ಲಿ ಇಡುತ್ತಾರೆ. ಅವುಗಳನ್ನು ಇಂದು ಎಲ್ಲಾರು ಉಪಯೋಗಿಸುತ್ತಾರೆ.

೧೮. ಮೀನಿನ ಆಕಾರದಲ್ಲಿ ಚಿತ್ರ ಹಾಕುವುದು: ಇಂದು ಮಾರುಕಟ್ಟೆಯಲ್ಲಿ ಇಂತಹ ವಸ್ತುಗಳಿಗೆ ತುಂಬ ಬೇಡಿಕೆಯಿದೆ. ಮೀನಿನ ಆಕಾರದಲ್ಲಿ ಚಿತ್ರಗಳನ್ನು ಬಿಡಿಸಿ ಮಾರುಕಟ್ಟೆಗೆ ಮತ್ತು ಸಂತೆಗಳಿಗೆ ಕಳುಹಿಸುತ್ತಾರೆ. ಇವುಗಳನ್ನು ಹಲವಾರು ಜನರು ಕೊಂಡುಕೊಳ್ಳುವುದರಿಂದ ಇದಕ್ಕೆ ಇನ್ನಿಷ್ಟು ಬೆಲೆ ಸಿಗುತ್ತದೆ. ಈ ಪರ್ಯಾಯ ಕಸುಬುಗಳಲ್ಲಿ ಮಹಿಳೆಯರ ಪಾತ್ರ ಹಿರಿದಾಗಿದ್ದು.

೧೯. ನವಿಲು ಆಕಾರ ಗುಂಡುಪಿನ್ ಆಕಿ ಅದಕ್ಕೆ ಚಿತ್ರ ಬಿಡಿಸುವುದು: ನವಿಲು ಆಕಾರ ಮಾಡಿ ಗುಂಡುಪಿನ್ ಆಕಿ ಅದಕ್ಕೆ ಬಿಟ್ಟ ಬಿಡಿಸಿ ಮಾರುಕಟ್ಟೆಗೆ ಕಳುಹಿಸುತ್ತಾರೆ.

ಈ ವಸ್ತುಗಳು ಸ್ವಲ್ಪ ಸರಳ ರೀತಿಯಲ್ಲಿ ಸಿಗುವುದರಿಂದ ಇದು ಸುಲಭವಾಗಿ ಕಡಿಮೆ ಬೆಲೆಗೆ ಸಿಗುತ್ತದೆ. ಮತ್ತು ಇಂಥ ವಸ್ತುಗಳನ್ನು ಮಹಿಳೆಯರೇ ತಯಾರಿಸುತ್ತಾರೆ.

**೪.೪. ಪರ್ಯಾಯ ಕಸುಬಿನ ಅವಲಂಬನೆ**

ಪಾರಂಪರಿಕೆ ಕಸುಬಿನಲ್ಲಿ ಆರ್ಥಿಕ ದುಸ್ಥಿರತೆಯನ್ನು ಅನುಭವಿಸಿದ ಪಿಂಜಾರ ಸಮುದಾಯವು ಪರ್ಯಾಯ ಕಸುಬನ್ನು ಅವಲಂಬಿಸಿತು. ಆಧುನಿಕ ಕಂಪನಿಗಳ ಭರಾಟೆಯಿಂದಾಗಿ ಅನಿವಾರ್ಯವಾಗಿ ಬೇರೆ ಬೇರೆ ವೃತ್ತಿಗಳನ್ನು ನಿರ್ವಹಿಸಲು ತೊಡಗಿದರು. 'ಸುಖನಿದ್ದೆಗಾಗಿ' ಈ 'ಬೆಡ್ ಕೊಳ್ಳಿರಿ, ಆರಾಮವಾಗಿ ಎದ್ದೇಳಿ' ಎನ್ನುವ ಜಾಹಿರಾತು ನೋಡಿದವರಿಗೆ ನೂರೆಂಟು ನಮೂನೆಯ ಕಂಪನಿಯ 'ಬೆಡ್'ಗಳು ಪರಿಚಯ, ಅವುಗಳ ಅಂದ-ಚೆಂದ, ವರ್ಣಾಲಂಕಾರಕ್ಕೆ ಮರಳಾಗುತ್ತಾರೆ. ಅಂತಹ 'ಬೆಡ್' ಬೇಕೆಂದಾಗಿ ಅಂಗಡಿಗಳಿಗೆ ಹೋಗಿ ಮಾರಾಟಕ್ಕೆ ಸಿದ್ಧವಾದ ಯಾವುದಾದರೂ ಒಂದು ಕಂಪನಿಯ ಬೆಡ್ಡನ್ನು ಆಯ್ದು ತರುವ ಸ್ಥಿತಿ ಈಗ ನಿರ್ಮಾಣವಾಗಿದೆ.

ಹೊಸ ಆವಿಷ್ಕಾರಗಳು ಹಾಗೂ ಹೆಚ್ಚುತ್ತಿರುವ ಸಾಫ್ಟಾದ ಯಾಂತ್ರೀಕರಣದಿಂದಾಗಿ ಉತ್ಪಾದನೆ ಕ್ಷೇತ್ರ ಬಿರುಸಿನಿಂದ ಕೆಲಸ ನಿರ್ವಹಿಸುತ್ತಿದೆ. ಮನುಷ್ಯನ ವಸ್ತು ಪ್ರೀತಿಯಿಂದಾಗಿ ಮನೋಭಾವದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಚಿಕ್ಕಪುಟ್ಟ ಉದ್ಯಮಗಳನ್ನು ಮಾಡುತ್ತಿದ್ದ, ಮೂಲ ಕಸುಬನ್ನಾಗಿಸಿಕೊಂಡು ಗಾದಿ-ದಿಂಬು ತಯಾರಿಸಿ ಉಪಜೀವನ ಸಾಗಿಸುತ್ತಿದ್ದ ಜನರು ಈ ಮೇಲಿನ ದಾಳಿಗೆ ತತ್ತರಿಸಿದ್ದಾರೆ. ತಲೆತಲಾಂತರದಿಂದ ಕುಲಕಸುಬನ್ನು ನಂಬಿಕೊಂಡು ಜೀವನ ನಡೆಸುತ್ತಿದ್ದ ಜನ ಇಂದು ಬೀದಿಪಾಲಾಗಿದ್ದಾರೆ. ಕೆಲವರು ಪರ್ಯಾಯ ಕಸುಬನ್ನು ಮಾಡುತ್ತಿದ್ದಾರೆ.

ಕುಲವೃತ್ತಿಯಾದ ಗಾದಿ, ದಿಂಬು ತಯಾರಿಕೆ ನಂಬಿಕೊಂಡು ಬಾಳುತ್ತಿದ್ದ ಪಿಂಜಾರ ಸಮುದಾಯ ಇಂದು ಮಾರುಕಟ್ಟೆ ದಾಳಿ ಇಟ್ಟಿರುವ ಸಿದ್ಧವಸ್ತುಗಳಿಂದಾಗಿ ಸಮಸ್ಯೆ ಎದುರಿಸುವಂತಾಗಿದೆ. ಇವರು ತಯಾರಿಸಿದ ಹಾಸಿಗೆಗಳಿಗೆ ಬೇಡಿಕೆ ಇಳಿಮುಖವಾಗುತ್ತಿದೆ. ಈ ಹಿಂದೆ ಅಲೆಮಾರಿಗಳಾಗಿದ್ದ ಈ ಸಮುದಾಯದ ಜನ ಊರೂರು ಅಲೆದಾಡುತ್ತ ಗಾದಿ ಮಾಡಿಕೊಡುವ ಕಾಯಕವನ್ನು ನಡೆಸುತ್ತಿದ್ದರು. ನಂತರದಲ್ಲಿ ಕೆಲವರು ನಗರಗಳಲ್ಲಿ ಅಂಗಡಿ ಹಾಕಿಕೊಂಡು ಇದೇ ಉದ್ಯಮದಲ್ಲಿ ತೊಡಗಿದರು. ಆದರೆ ಕಡಿಮೆಯಾಗುತ್ತಿರುವ ಇತ್ತೀಚೆಗಿನ ಬೇಡಿಕೆಯಿಂದಾಗಿ ಈ ಕಾಯಕ ತೊರೆದು ಅನ್ನ ಉದ್ಯೋಗಗಳತ್ತ ವಾಲುವಂತಾಗಿದೆ.

ಬದಲಾಗುತ್ತಿರುವ ಕಾಲಮಾನ, ಶರವೇಗದಲ್ಲಿ ನಡೆಯುತ್ತಿರುವ ಆಧುನೀಕರಣದ ಭರಾಟೆಯಲ್ಲಿ ಕುಲವೃತ್ತಿಗಳು ಇಂದು ಮರೆಯಾಗುತ್ತಿವೆ. ಹತ್ತಿಯಿಂದ ತಯಾರಿಸುವ ಗಾದಿ, ದಿಂಬು, ತೆಕ್ಕ ಮುಂತಾದವುಗಳನ್ನು ತಯಾರಿಸುವುದಲ್ಲಿಯೇ ಕೈಲಾಸ ಕಾಣುವ ಪಿಂಜಾರರ

ಕೈಗಳಿಗೆ ಇಂದು ಕೆಲಸವಿಲ್ಲದಂತಾಗಿದೆ. ಖಾಸಗಿ ಕಂಪನಿಗಳು ಹಾವಳಿಯಿಂದಾಗಿ ರೆಡಿಮೇಡ್ ಆದ ಗಾದಿ, ದಿಂಬು, ತೆಕ್ಕೆಗಳು ಮಾರುಕಟ್ಟೆಗೆ ಲಗ್ಗೆಯಿಟ್ಟವೆ. ಇದರಿಂದ ಇವರನ್ನು ಕೇಳುವವರೇ ಇಲ್ಲದಂತಾಗಿದೆ. ಕೇವಲ ಗ್ರಾಮೀಣ ಪ್ರದೇಶಗಳಲ್ಲಿ ಮದುವೆ ಸಂದರ್ಭದಲ್ಲಿ ಸಂಪ್ರದಾಯದಂತೆ ಹೆಣ್ಣಿಗೆ ನೀಡುವ ಗಾದಿ ತಯಾರಿಸಲು ಮಾತ್ರ ಜನ ಇವರನ್ನು ನೆನಪಿಸಿಕೊಳ್ಳುತ್ತಿದ್ದಾರೆ. ಆಧುನಿಕತೆಗೆ ತಕ್ಕಂತೆ ಬ್ಯಾಕ್ಸ್ ಗಾದಿ ಬಿಗಿಯುವುದರಲ್ಲಿ ಪರಿಣಿತಿ ಪಡೆದರೂ ಸಹ ಇವರ ಬದುಕಿಗೆ ಸಾಕಾಗುವಷ್ಟು ದುಡಿಮೆ ಸಿಗುತ್ತಿಲ್ಲ. ಎಲ್ಲರಿಗೂ ಕಂಪನಿಗಳ ಗಾದಿಗಳೇ ಬೇಕಾಗಿವೆ. ಹೀಗಾಗಿ ಈ ಸಮುದಾಯದವರೆಲ್ಲ ಟೈಲರಿಂಗ್, ಹಾಸುಗಲ್ ಹಾಕುವುದು, ಹಗ್ಗ ಒಸೆಯುವುದು, ಗ್ಯಾರೇಜ್ ನಡೆಸುತ್ತಾರೆ. ಟೀ-ಕಾಫಿ ಅಂಗಡಿ, ಸೈಕಲ್ ಶಾಪ್‌ಗಳು ಸೇರಿದಂತೆ ಇನ್ನಿತರೆ ಉದ್ಯೋಗ ಮಾಡುತ್ತಿರುವುದು ಕಂಡುಬರುತ್ತಿದೆ.

ಅಧ್ಯಯನದ ದೃಷ್ಟಿಯಿಂದ ಪರ್ಯಾಯ ಕಸುಬುಗಳನ್ನು ಮೂರು ರೀತಿಯಲ್ಲಿ ವಿಂಗಡಿಸಬಹುದಾಗಿದೆ.

೧. ಕುಶಲಕಲೆಯ ಅವಲಂಬನೆಯಲ್ಲಿ : ಮಹಿಳೆಯರು

೨. ಪರಿಶ್ರಮದಾಯಕ ಕೆಲಸಗಳಲ್ಲಿ : ಮಹಿಳೆಯರು

೩. ಪರ್ಯಾಯ ಕಸುಬುಗಳ ಅವಲಂಬನೆಲ್ಲಿ : ಪುರುಷರು

**೧. ಕುಶಲಕಲೆಯ ಅವಲಂಬನೆಯಲ್ಲಿ : ಮಹಿಳೆಯರು**

ತಮ್ಮ ಕುಟುಂಬದ ಸದಸ್ಯರೊಂದಿಗೆ ಗಾದಿ-ದಿಂಬುಗಳನ್ನು ತಯಾರಿಸಲು ಸಹಾಯಕವಾಗಿ ನಿಲ್ಲುತ್ತಿದ್ದ ಮಹಿಳೆಯರು ಈ ವೃತ್ತಿಯಿಂದ ನಿವೃತ್ತಿ ಹೊಂದಿದ ಮೇಲೆ ಕೌಶಲ್ಯಭರಿತವಾದ ಕೆಲವು ಕಲಾತ್ಮಕ ಕಸುಬುಗಳನ್ನು ತಯಾರಿಸಲು ಶುರು ಮಾಡಿದರು. ಅಂತಹ ಕಲಾತ್ಮಕ ವೃತ್ತಿಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

೧. ಬಟ್ಟೆಗಳಿಗೆ ಚಿತ್ರಗಳನ್ನು ಹಾಕುವುದು.

೨. ಅನ್ನ ಮುಚ್ಚುವ ಬಟ್ಟೆಗಳ ಮೇಲೆ ಚಿತ್ರಗಳನ್ನು ಬಿಡಿಸುವುದು.

೩. ಸೀರೆಗಳ ಮೇಲೆ ಚಿತ್ರಗಳನ್ನು ಹಾಕುವುದು.

೪. ಸೀರೆಗಳಿಗೆ ಕುಚ್ಚು ಹಾಕುವುದು.

೫. ಟೇಬಲ್ ಮೇಲೆ ಹಾಕುವ ಬಟ್ಟೆಗೆ ಚಿತ್ರ ಹಾಕುವುದು.

೬. ಪೋನ್ ಮೇಲೆ ಹಾಕುವ ಬಟ್ಟೆಗೆ ಚಿತ್ರ ಬಿಡಿಸುವುದು.

೭. ಕಾಟನ್ ಬಟ್ಟೆಗೆ ವಿವಿಧ ಚಿತ್ರಗಳನ್ನು ಬಿಡಿಸುವುದು.

೮. ಟಿ.ವಿ. ಮೇಲೆ ಹಾಕುವ ಬಟ್ಟೆಗೆ ಚಿತ್ರ ಬಿಡಿಸುವುದು.

೯. ಸೋಫಾ ಮೇಲೆ ಹಾಕುವ ಬಟ್ಟೆಗೆ ಚಿತ್ರ ಹಾಕುವುದು.

೧೦. ನೆಲಕ್ಕೆ ಹಾಕುವ ಬಟ್ಟೆಗೆ ಚಿತ್ರ ಹಾಕುವುದು.

೧೧. ಪ್ಲಾಸ್ಟಿಕ್ ಬುಟ್ಟಿ ಮೇಲೆ ಚಿತ್ರ ಬಿಡಿಸುವುದು.

೧೨. ಹೂ ಕುಂಡಗಳ ಮೇಲೆ ಚಿತ್ರ ಬಿಡಿಸುವುದು.

೧೩. ಟಿಫಿನ್ ಬಾಕ್ಸ ಮೇಲೆ ಚಿತ್ರ ಬಿಡಿಸುವುದು.

೧೪. ಪ್ಲಾಸ್ಟಿಕ್ ಬಳೆ ಮೇಲೆ ಚಿತ್ರ ಬಿಡಿಸುವುದು.

೧೫. ಉಲನ್ ಬಾಸ್ಕೇಟ್ ಮೇಲೆ ಚಿತ್ರ ಬಿಡಿಸುವುದು.

೧೬. ಸುಟ್ಟ ಲೈಟ್‌ಗೆ ಚಿತ್ರ ಬಿಡಿಸುವುದು.

೧೭. ಮಣಿಗಳಿಂದ ಹೂ ಆಕಾರ ಮಾಡುವುದು.

೧೮. ಮೀನಿನ ಆಕಾರದಲ್ಲಿ (ಚಿತ್ರ) ಹಾಕುವುದು.

೧೯. ನವಿಲು ಆಕಾರ ಗುಂಡುಪೀನ್ ಹಾಕಿ, ಅದಕ್ಕೆ ಚಿತ್ರ ಬಿಡಿಸುವುದು.

**೨. ಪರಿಶ್ರಮದಾಯಕ ಕೆಲಸಗಳಲ್ಲಿ : ಮಹಿಳೆಯರು**

ಮಹಿಳೆಯರು ಕಲಾತ್ಮಕ ಕೆಲಸಗಳಲ್ಲಿ ಅವಲಂಬನೆಯಾಗಿರುವುದಲ್ಲದೆ, ಕೆಲವು ಪರಿಶ್ರಮದಾಯಕವಾದ, ಕೃಷಿ ಸಂಬಂಧಿತ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಜಮೀನುಗಳಲ್ಲಿ ಬಿತ್ತನೆ, ನಾಟಿ, ಕೊಯ್ಲು ಕೆಲಸಗಳಲ್ಲಿ ಭಾಗಿಯಾಗುತ್ತಾರೆ. ಕೃಷಿ ಕಾರ್ಮಿಕರಾಗಿಯೂ ಕಾರ್ಯಪ್ರವೃತ್ತರಾಗಿದ್ದಾರೆ. ಗಾರೆ ಕೆಲಸದಲ್ಲಿ ಸಿಮೆಂಟ್ ಕಲಿಸುತ್ತಾರೆ. ಇಟ್ಟಿಗೆ ಹೊರುತ್ತಾರೆ, ಕಮ್ಮಾರಿಕೆ ಮಾಡುತ್ತಿದ್ದಾರೆ, ಕಾಯಿಸಿದ ಕಬ್ಬಿಣಕ್ಕೆ ಸುತ್ತಿಗೆಯಿಂದ ಗಂಡು ಮಕ್ಕಳಂತೆ ಹೊಡೆದು ಬಗ್ಗಿಸುತ್ತಾರೆ. ಕಲ್ಲು ಹೊಡೆಯುವ ಕೆಲಸ, ದಿನನಿತ್ಯವೂ ಮನೆಯಲ್ಲಿ ದುಡಿಯುವುದಲ್ಲದೆ ಮನೆ ಹೊರಗಿನ ಕೆಲಸಗಳನ್ನು ನೋಡಿಕೊಂಡು ಹೋಗುತ್ತಾರೆ.

**೩. ಪರ್ಯಾಯ ಕಸುಬುಗಳ ಅವಲಂಬನೆಲ್ಲಿ : ಪುರುಷರು**

**೧. ಕೃಷಿ:**

ಪಿಂಜಾರ ಸಮುದಾಯದ ಜನರು ತಮ್ಮ ಮೂಲ ಕಸುಬನ್ನು ಬಿಟ್ಟು ಕೃಷಿಯನ್ನು ತಮ್ಮ ಕಸುಬಾಗಿ ಬದುಕಿಗೆ ಅವಲಂಬಿಸಿದ್ದಾರೆ. ಇದೇ ಜನಾಂಗದಲ್ಲಿ ಅಲ್ಪಸ್ವಲ್ಪ ಭೂಮಿಯನ್ನು ಹೊಂದಿದ ಜನ ಸಾಂಪ್ರದಾಯಿಕ ಕೃಷಿ ಪದ್ಧತಿಯನ್ನು ಅವಲಂಬಿಸಿದ್ದಾರೆ. ಸ್ವಲ್ಪ ಭೂಮಿಯೇ ಇರದ ಹೊಲಗದ್ದೆಗಳಲ್ಲಿ ಕಳೆ ತೆಗೆಯುವುದರಲ್ಲಿ, ಇನ್ನಿತರ ಕೃಷಿ ಕೆಲಸಗಳನ್ನು ಅವಲಂಬಿಸಿದ್ದಾರೆ.

ರಾಯಚೂರು ಜಿಲ್ಲೆಯ ಪಿಂಜಾರ ಜನಾಂಗದ ಜನ ಸಮುದಾಯದಲ್ಲಿ ಸಾಂಪ್ರದಾಯಿಕ ಕೃಷಿ ಪದ್ಧತಿಯನ್ನು ಶೇ.೪೫ರಷ್ಟು, ಆಧುನಿಕ ಕೃಷಿ ಶೇ.೨೫ರಷ್ಟು ಜನ ಕೃಷಿಯನ್ನು ಅವಲಂಬಿಸಿದ್ದಾರೆ. ಭೂಮಿಯನ್ನು ಹೊಂದಿರದ ಪ್ರತಿಶತ ಶೇ.೬೫ರಷ್ಟು ಜನ ಕೃಷಿಯನ್ನು ಹೊಂದಿದ್ದಾರೆ.

**೨. ಕರಕುಶಲ ಕಲೆ:**

ಬಾಗಲಕೋಟೆದ ಖ್ಯಾತ ಮಲ್ಲಪ್ಪ ಮಾಯಾಚಾರ್ಯರ ಗರಡಿಯಲ್ಲಿ ಪಾರಂಗತಾರದ 'ಅಲ್ಲಿಸಾಬ' ಗುಡಿಗುಂಡಾರ, ಮಠ, ಗೋಪುರಗಳಿಗೆ ಶಿಲ್ಪ ಕೆತ್ತಿ ಸೌಂದರ್ಯಕ್ಕೆ ಮೆರಗು ತಂದರು. ಇವರ ಗರಡಿಯಲ್ಲಿ ರಾಯಚೂರಿನ ಬಹುತೇಕ ಶಿಲ್ಪಕಲಾ ಆಸಕ್ತಿದಾಯಕ ವಿದ್ಯಾರ್ಥಿಗಳು ಇವರ ಬಳಿ ಅಭ್ಯಾಸ ನಡೆಸುತ್ತಿದ್ದಾರೆ. ಅಪ್ಪಲಾಲ್ ನದಾಫ್‌ನಂತರವರು ಶ್ರೀಕೃಷ್ಣ ಪಾರಿಜಾತ ಮುಂತಾದ ಜಾನಪದ ಬಯಲಾಟಗಳನ್ನು ಕಲಾತ್ಮಕವಾಗಿ ಅಭಿನಯಿಸುತ್ತಾರೆ. ಸತ್ಯಭಾಮ ಪಾತ್ರವನ್ನು ಪುರುಷರೇ ನಿರ್ವಹಿಸುವುದು ಒಂದು ವಿಶೇಷ. ಅನೇಕ ಪಿಂಜಾರ ಯುವಕರು ಚಿತ್ರಕಲೆಗೆ ವಾಲುತ್ತಿದ್ದಾರೆ. ಜೊತೆಗೆ ಬೇಕರಿ, ಕಟ್ಟಿಂಗ್‌ಶಾಪ್, ಇತರೆ ಅಂಗಡಿಗಳಲ್ಲಿ ಶೋಕೇಸ್ ಮಾಡುವುದು, ಮನೆಬಳಕೆಗೆ ಬಳಸುವ ಅಲಮಾರ್ ತಯಾರಿಸುವುದು, ಗಾದೆಗಳ ಮೇಲೆ, ದಿಂಬುಗಳ ಸುತ್ತ ಕಲಾತ್ಮಕವಾಗಿ ಎಂಬ್ರಾಯಡರು, ಸ್ವತಃ ಕೈಯಿಂದಲೇ ಮಾಡುತ್ತಾರೆ. ಇವರ ವಿಶಿಷ್ಟ ಕಲಾತ್ಮಕವನ್ನು ನೋಡಿದ ಗ್ರಾಹಕರು ಚೌಕಾಸಿ ಮಾಡಿಯೇ ಕೊಳ್ಳುತ್ತಾರೆ. ಒಮ್ಮೊಮ್ಮೆ ಕರಕುಶಲತೆಗೂ ಬಳಸಿದ ಕಚ್ಚಾವಸ್ತುಗಳ ಮೇಲೆ ಸ್ವಲ್ಪ ಹಣ ದೊರೆತರೆ ಸಾಕು ಅದನ್ನೇ ಮಾರಾಟ ಮಾಡುತ್ತಾರೆ. ಅಧಿಕ ಲಾಭದ ಆಸೆಯನ್ನೆ ಪಟ್ಟು ಸ್ಟಾಕ್ ಮಾಡಿಕೊಳ್ಳಲು ಬಯಸುವುದಿಲ್ಲ.

**೩. ಸೈಕಲ್‌ಶಾಪ್**

ಸೈಕಲ್ ಪಂಚಾರ್ ಅಂಗಡಿ ಮತ್ತು ಸೈಕಲ್‌ಗಳನ್ನು ಬಾಡಿಗೆ ಕೊಡುವ ವೃತ್ತಿಯನ್ನು ಸಹ ಪಿಂಜಾರರು ನಡೆಸಿಕೊಂಡು ಹೋಗುತ್ತಾರೆ. ಪಟ್ಟಣಗಳಲ್ಲಿ ಸೈಕಲ್ ಅಂಗಡಿಗಳು ಶಾಲಾ ಕಾಲೇಜುಗಳೆದುರು ಸಾಮಾನ್ಯವಾಗಿ ಇರುತ್ತವೆ. ಬಹುತೇಕವಾಗಿ ಪಿಂಜಾರ ಸಮುದಾಯಕ್ಕೆ ಸೇರಿದ ಯುವಕರು, ವಯಸ್ಕ ಮುದುಕರು ಅದರ ಮಾಲಿಕರಾಗಿರುತ್ತಾರೆ. ಜೊತೆಗೆ ಅವನೇ ಕೆಲಸಗಾರನಾಗಿರುತ್ತಾನೆ. ಸೈಕಲ್ ಪಂಚರ್‌ನಿಂದ ಹಿಡಿದು ಸೀಟ್ ಕವರ್, ಹ್ಯಾಂಡಲ್, ಗ್ರೀಪ್ಸೆ, ಬ್ರೇಕ್‌ಗಳು, ಕಡ್ಡಿಗಳು, ಗಾಲಿಗೆ ಬಳಸುವ ಬೋಲ್ಟ್‌ಗಳನ್ನು ನೆಕ್‌ಬೆಡ್‌ಗಳನ್ನು ಬಿಡಿಭಾಗಗಳಾಗಿ ಮಾರಾಟವನ್ನು ಸಹ ಮಾಡುತ್ತಾರೆ.

ಜೊತೆಗೆ ಕೆಲವು ಸೈಕಲ್‌ಗಳನ್ನು ಸರಿಪಡಿಸಿ ದುರಸ್ತಿ ಮಾಡಿಕೊಂಡು ಅವುಗಳನ್ನು ಬಾಡಿಗೆಗೆ ಕೊಡುತ್ತಾರೆ. ಗಂಟೆಗೆ ರೂ.೫, ೧೦ ಗಳನ್ನು ತೆಗೆದುಕೊಂಡು ನಂಬಿಕೆಗಾಗಿ

ಗುರುತಿನ ಚೀಟಿಯನ್ನು ಅವರಿಂದ ಪಡೆಯುತ್ತಾರೆ. ಒಂದು ಪಂಚರ್‌ಗೆ ರೂ.೮ ತೆಗೆದುಕೊಳ್ಳುತ್ತಾರೆ. ಒಂದು ಪಕ್ಷ ಪಂಚರ್ ಆಗದಿದ್ದಲ್ಲಿ ಪರೀಕ್ಷಿಸಿದ್ದಕ್ಕಾಗಿ ರೂ.೪ ಗಳನ್ನು ತೆಗೆದುಕೊಳ್ಳುತ್ತಾರೆ. ಹೀಗೆ ಬಾಡಿಗೆ ಮತ್ತು ಸೈಕಲ್ ಪಂಚರ್‌ನಿಂದ ಅಷ್ಟೇ ಅಲ್ಲದೆ ಬಿಡಿಭಾಗಗಳ ಮಾರಾಟದಿಂದ ಕನಿಷ್ಟ ಆದಾಯದೊಂದಿಗೆ ಜೀವನ ಸಾಗಿಸುತ್ತಿದ್ದಾರೆ. ಒಮ್ಮೊಮ್ಮೆ ಹಳೆಯ ಸೈಕಲ್‌ಗಳನ್ನು ಖರೀದಿಸಿ ರೀಫಿಟಿಂಗ್ ಮಾಡುವ ಪರಿಪಾಠವೂ ಉಂಟು.

೪. ಕಿರಾಣಿ ಅಂಗಡಿ

ಮಿತಬಂಡವಾಳವನ್ನು ಕೂಡಿಸಿಕೊಂಡು ನಗರ ಮತ್ತು ಗ್ರಾಮಗಳಲ್ಲಿ ಕಿರಾಣಿ ಅಂಗಡಿಗಳನ್ನು ಹೊಂದಿರುತ್ತಾರೆ. ಸಂತೆಯ ದಿನಗಳಲ್ಲಿ ಅಧಿಕ ವ್ಯಾಪಾರ, ಅನೇಕ ಕಂಪನಿಗಳಿಂದ ಪ್ಯಾಕೆಟ್ ರೂಪದಲ್ಲಿ ಕೆಲವು ವಸ್ತುಗಳನ್ನು ತರಿಸುತ್ತಾರೆ. ಕಿರಾಣಿ ಅಂಗಡಿಗಳಿಗೆ ಬೇಕಾದ ಅಗತ್ಯ ವಸ್ತುಗಳ ಪೂರೈಕೆಯನ್ನು ಬೇರೆ ಬೇರೆ ಸ್ಥಳಗಳಿಂದ ತರಿಸಿ, ಹೋಲ್‌ಸೇಲ್ ಅಂಗಡಿಗಳಿಂದ ಖರೀದಿಸಿ ಮಾರಾಟ ಮಾಡುತ್ತಾರೆ.

೫. ಚಹಾ ಅಂಗಡಿ

ಚಹಾ ಮಾರಾಟವನ್ನು ಪಿಂಜಾರರು ಮೂರು–ನಾಲ್ಕು ರೀತಿಯಲ್ಲಿ ಮಾರಾಟ ಮಾಡುತ್ತಾರೆ. ದೊಡ್ಡ ದೊಡ್ಡ ಪ್ಲಾಸ್ಕ್‌ಗಳಲ್ಲಿ ಟೀಯನ್ನು ತಂದುಕೊಂಡು ಸಾರ್ವಜನಿಕ ಸ್ಥಳಗಳಲ್ಲಿ ಜನರ ಬಳಿಗೆ ಹೋಗಿ ಮಾರಾಟಮಾಡುತ್ತಾರೆ. ದವಲ್‌ಸಾಬ್ ಎಂಬ ಯುವಕನು ಅಶಿಕ್ಷಿತನಾಗಿದ್ದು, ಅವನು ಹೇಳುವಂತೆ "ನಾಲ್ಕಾರು ಕೇರಿಗಳಿರುವ ೫೦ ಅಂಗಡಿಗಳನ್ನು ಗುತ್ತಿಗೆ ಹಿಡಿದು ದಿನಕ್ಕೆ ೩ ಸಲ ಟೀ, ಕಾಫಿ ಸರಬರಾಜು ಮಾಡುತ್ತೇನೆ. ಒಂದು ಟೀಗೆ ನಾಲ್ಕು ರೂಪಾಯಿ ಆಗುತ್ತದೆ. ಕನಿಷ್ಟ ೫೦ ಅಂಗಡಿಗಳಲ್ಲಿ ೨೫೦ ಜನರಿರುತ್ತಾರೆ. ಒಟ್ಟು ಮೊತ್ತ ರೂ.೩೦೦೦ ಗಳನ್ನು ಒಂದು ದಿನಕ್ಕೆ ದೊರಕುತ್ತಿದೆ. ಟೀಗೆ ೧೫ ಲೀಟರ್ ಹಾಲು, ಒಂದು ಕೆಜಿ ಟೀ ಪೌಡರ್, ೪ ಕೆಜಿ ಸಕ್ಕರೆ ಹೀಗೆ ಇನ್ನಿತರ ಖರ್ಚನ್ನು ತೆಗೆದರೆ ಕನಿಷ್ಟ ನನಗೆ ರೂ.೮೦೦–೧೩೦೦ ಗಳು ಉಳಿಯುತ್ತದೆ" ಎನ್ನುತ್ತಾರೆ.

ಹೀಗೆ ಟೀ ಮಾರಾಟದಿಂದಲೂ ಸಹ ಅರ್ಥಿಕ ಸಬಲತೆಯನ್ನು ಹೊಂದುತ್ತಾರೆ. ಹಾರ್ಲಿಕ್ಸ್, ಬೋರ್ನ್‌ವಿಟಾ, ಬಾದಾಮಿ ಹಾಲು, ಕಾಫಿ, ಬಿಸ್ಕತ್ ಮಾರಾಟ ಸಹ ಮಾಡುತ್ತಾರೆ. ತಳ್ಳುಗಾಡಿ, ಬಾಡಿಗೆಗೆ ಅಂಗಡಿಗಳನ್ನು ತೆಗೆದುಕೊಂಡು ವ್ಯಾಪಾರದ ದೃಷ್ಟಿಯಿಂದ ಲಾಭ ನಷ್ಟವನ್ನು ಮೊದಲೇ ಆಲೋಚಿಸಿ ಟೀ ಅಂಗಡಿಯನ್ನು ತೆರೆಯುತ್ತಾರೆ.

೬. ಹಳೆ ಕಬ್ಬಿಣ, ಪೇಪರ್, ಖಾಲಿ ಬಾಟಲಿ ಸಂಗ್ರಹ

ಇದು ಇವರ ವಿಶೇಷ ಕಸುಬು ಹೌದು. ಒಂದು ಕಾಲದಲ್ಲಿ ಹಳ್ಳಿ-ಹಳ್ಳಿಗೆ ಸೈಕಲ್ ಮೇಲೆ ತಿರುಗುತ್ತಾ, ಐಸ್ ತಿಂಡಿ, ಪೇರಲಹಣ್ಣು, ಬಟಾಣಿ, ಇತ್ಯಾದಿ ದೊಡ್ಡ ಪೆಟ್ಟಿಗೆ ಸೈಕಲ್ ಕ್ಯಾರಿಯರ್ ಕಟ್ಟಿಕೊಂಡು ಬರುತ್ತಿದ್ದರು. ಕ್ಯಾರಿಯರ್‌ನ ಆಜುಬಾಜಿಗೆ ನೆಲಕ್ಕೆ ತಾಕದಂತೆ ೨ ಗೋಣಿಚೀಲಗಳನ್ನು ಕಟ್ಟಿಕೊಂಡು ಬರುತ್ತಿದ್ದರು. ಹಳ್ಳಿಯ ಮಕ್ಕಳಿಂದ ಹಿಡಿದು ವಯಸ್ಸಾದವರ ತನಕ ಕೆಲಸಕ್ಕೆ ಬಾರದ ವಸ್ತುಗಳನ್ನು ಕೊಟ್ಟು ತಿನ್ನಲು ಪಡೆಯುತ್ತಿದ್ದರು. ಹಣವನ್ನು ಕೊಟ್ಟು ಸಹ ಪಡೆಯುವವರಿದ್ದರು. ಹೀಗೆ ಇವರು ಹಳೆಕಬ್ಬಿಣ, ಪೇಪರ್, ಖಾಲಿ ಬಾಟಲಿ ಸಂಗ್ರಹ ಮಾಡುತ್ತಿದ್ದರು. ಇವುಗಳನ್ನು ನಗರದಲ್ಲಿ ಇಟ್ಟಿರುವ ಬೃಹತ್ ಅಂಗಡಿಗೆ ಮಾರಾಟ ಮಾಡಿ ಹಣ ಸಂಪಾದಿಸುತ್ತಾರೆ. ಕೆಲವು ಪಿಂಜಾರರು ತಾವೇ ಬೃಹತ್ ಹಳೆ ಕಬ್ಬಿಣ ಸಂಗ್ರಹದ ಅಂಗಡಿಗಳನ್ನು ತೆರೆದಿದ್ದಾರೆ. ಈಗ ನಗರಗಳಲ್ಲಿ ಬೇಡವಾದ ವಸ್ತುಗಳನ್ನು ಗುಜರಿಗೆ ಹಾಕಿ ಹಣ ಪಡೆಯುತ್ತಾರೆ. ಇದರಿಂದಲೂ ಇವರಿಗೆ ಜೀವನೋಪಾಯಕ್ಕೆ ದಾರಿಯಾಗಿದೆ. ವಾರಕ್ಕೆ, ತಿಂಗಳಿಗೋ ಬೃಹತ್ ಲಾರಿಗಳಲ್ಲಿ ಪೂನ, ಬೆಂಗಳೂರು, ಮುಂಬಯಿ, ಮುಂತಾದ ಕಡೆಗೆ ಸರಬರಾಜು ಮಾಡುತ್ತಾರೆ.

೭. ಗಾದಿ ಅಂಗಡಿ

ನ್ಯೂಭಾರತ್ ಸೆಂಟರ್, ಕರ್ನಾಟಕದ ಬೆಡ್‌ಸೆಂಟರ್, ಇಂಡಿಯನ್ ಬೆಡ್ ಸೆಂಟರ್, ಹಿಂದೂಸ್ಥಾನ್ ಬೆಡ್‌ಸೆಂಟರ್ ಎಂಬ ಹೆಸರಿನ ಚಿಕ್ಕ-ದೊಡ್ಡ-ಮಹಲ್‌ಗಳನ್ನು ಕಾಣಬಹುದು. ಪಿಂಜಾರರು ಬಾಡಿಗೆಗೆ ಮಹಲುಗಳನ್ನು ಪಡೆದು ಇದರಲ್ಲಿ ಗಾದಿಗೆ ಸಂಬಂಧಪಟ್ಟ ಎಲ್ಲಾ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಜೊತೆಗೆ ಚಾಪೆ, ಮ್ಯಾಟ್, ದಿಂಬಿನ ಕವರ್, ಗಾದಿ ಕವರ್, ಬೆಡ್‌ಸ್ಪ್ರೆಡ್ ಇತ್ಯಾದಿಗಳನ್ನು ಸಹ ಸ್ವತಃ ಮಾರಾಟ ಮಾಡುತ್ತಾರೆ.

ಕುಲಕಸುಬು ಎಂಬುದನ್ನು ದೃಷ್ಟಿಯಲ್ಲಿಟ್ಟುಕೊಂಡ ಪಿಂಜಾರರು ಇದ್ದಾರೆ. ಆರ್ಥಿಕವಾಗಿ ಹೇಗೇಗೆ ಅಭಿವೃದ್ಧಿ ಕಾಣಬೇಕು ಎಂಬುದನ್ನು ಯೋಚಿಸಿ ವೃತ್ತಿಯಾಗಿ ಪರಿಗಣಿಸಿದ ಪಿಂಜಾರರು ಇದ್ದಾರೆ.

ತಮ್ಮದೇ ಸಮುದಾಯದ ಗಾದಿ-ದಿಂಬು ತಯಾರಿಸಲು ಬರುವವರಿಗೆ ಆರ್ಡರ್ ಕೊಟ್ಟು ಈ ಅಂಗಡಿಯವರು ಮಾಡಿಸುತ್ತಾರೆ. ಜೀವನೋಪಾಯಕ್ಕಾಗಿ ಆಧುನಿಕತೆಗೂ ಒಳಗಾಗಿರುವುದನ್ನು ಕಾಣಬಹುದು. ಸ್ಪಂಜಿನಿಂದ ತಯಾರಿಸಿದ ಬೆಡ್‌ಗಳು ಆರೋಗ್ಯದ ಮೇಲೆ ಏರುಪೇರು ಮಾಡುತ್ತದೆ. ಹತ್ತಿಯಿಂದ ತಯಾರಿಸಿದ ಬೆಡ್‌ಗಳು ಆರೋಗ್ಯಕ್ಕೆ ಉತ್ತಮ ಎಂಬ ಅಭಿಪ್ರಾಯಗಳನ್ನು ಸಹ ವ್ಯಕ್ತಪಡಿಸುತ್ತಾರೆ.

೮. ಚಪ್ಪಲಿ ಅಂಗಡಿ

ಪಿಂಜಾರರು ಹೈದ್ರಾಬಾದ್-ಬಾಂಬೆ, ಬೆಂಗಳೂರು, ಹುಬ್ಬಳ್ಳಿ ಮುಂತಾದ ಕಡೆಯಿಂದ ಚಪ್ಪಲಿ ಖರೀದಿಸಿ ತಂದು ತಾವಿರುವ ತಾಲೂಕು ಹೋಬಳಿ ಕೇಂದ್ರಗಳಲ್ಲಿ ನ್ಯೂಶೋ ಕಾರ್ನರ್, ಮುಂತಾದ ಹೆಸರುಗಳಿಂದ ಚಪ್ಪಲಿ ಅಂಗಡಿಗಳನ್ನು ನಡೆಸುತ್ತಾರೆ.

೯. ಐಸ್‌ಕ್ರೀಮ್ ಫ್ಯಾಕ್ಟರಿ ಮತ್ತು ಐಸ್‌ಕ್ರೀಮ್

ಬೇಸಿಗೆ ಕಾಲದಲ್ಲಿ ಪಿಂಜಾರರು ಐಸ್‌ಕ್ರೀಮ್ ಪ್ಯಾಕ್ಟರಿಗಳನ್ನು ಶುರು ಮಾಡುತ್ತಾರೆ. ತುಂಬ ಸ್ಟ್ಯಾಂಡರ್ಡ್ ಗುಣಮಟ್ಟದಿಂದ ಕೂಡಿರುತ್ತದೆ. ಸಾಮಾನ್ಯ ಜನತೆಗೆ ರುಚಿಸುವಷ್ಟು ರುಚಿಯಿಂದ ಕೂಡಿರುತ್ತದೆ. ಈ ಫ್ಯಾಕ್ಟರಿಗಳ ಮೂಲಕ ಅನೇಕ ತಳ್ಳುಗಾಡಿಗಳನ್ನು ಕೊಟ್ಟು ವ್ಯಾಪಾರ ಶುರು ಮಾಡುತ್ತಾರೆ. ವೆನಿಲ್ಲಾ, ಮ್ಯಾಂಗೊ, ಆರೆಂಜ್, ಚಾಕೋಲೇಟ್, ಪ್ರೂಟ್ಸ್, ಬಾದಾಮಿ, ಗುಲಾಬಿ, ಕ್ಯಾಂಡಿ, ಕಪ್ಪು ಐಸ್‌ಕ್ರೀಮ್, ಫಿಸ್ತ, ಮಿಕ್ಸ್‌ಡ ಐಸ್‌ಕ್ರೀಮ್ ಮುಂತಾದ ಬಗೆಗಳಲ್ಲಿ ತಯಾರಿಸುತ್ತಾರೆ.

ಕ್ಯಾಂಡಿ ಐಸ್‌ಕ್ರೀಮ್‌ಗಳನ್ನು ಬಹುತೇಕ ಪಿಂಜಾರರು ತಯಾರಿಸುತ್ತಾರೆ. ಐಸ್‌ಕ್ರೀಮ್‌ಅನ್ನು ಪರ್ಯಾಯ ಕಸುಬಾಗಿ ಸ್ವೀಕರಿಸಿ ಪಿಂಜಾರರು ಬದುಕು ನಡೆಸುತ್ತಾರೆ. ಪ್ರತಿನಿತ್ಯ ೧೦೦ ಕ್ಯಾಂಡಿ ಐಸ್‌ಗಳನ್ನು ಮಾರಿದರೆ ಸಾಕು ಆ ದಿನದ ಖರ್ಚಿಗೆ ಹಣ ದೊರೆಯುತ್ತದೆ. ಚಿಕ್ಕಮಟ್ಟ ಮಕ್ಕಳು ರಜೆ ದಿನಗಳಲ್ಲಿ ಈ ಕೆಲಸವನ್ನು ಮಾಡುತ್ತಾರೆ.

**೪೨. ಮೇಣಬತ್ತಿ:** ಪಿಂಜಾರರು ಪರ್ಯಾಯ ಕಸುಬನ್ನಾಗಿ ಮೇಣದಬತ್ತಿ ತಯಾರಿಸುತ್ತಾರೆ. ಹೆಸರೇ ಸೂಚಿಸುವಂತೆ ಮೇಣ ಮತ್ತು ಬತ್ತಿಯನ್ನು ಉಪಯೋಗಿಸಿ ಮೇಣಬತ್ತಿಯನ್ನು ತಯಾರಿಸುವರು. ಮನೆ, ಚರ್ಚು, ದೇವಸ್ಥಾನ ಮತ್ತು ಧಾರ್ಮಿಕ ಕಾರ್ಯಕ್ರಮಗಳನ್ನು ವಿಶೇಷವಾಗಿ ದೀಪಾವಳಿಗಳಲ್ಲಿ ಹಬ್ಬ, ಉತ್ಸವಗಳಲ್ಲಿ ಮೇಣಬತ್ತಿಯ ಉಪಯೋಗ ಬಹಳವಿದೆ. ಮನೆ, ಹೋಟೆಲ್‌ಗಳಲ್ಲಿ ದಿನನಿತ್ಯ ಉಪಯೋಗಕ್ಕೆ ಬೇಕೇ ಬೇಕು. ಮೇಣಬತ್ತಿಯನ್ನು ಬೇಡಿಕೊಂಡು ಆಧಾರದ ಮೇಲೆ ವಿವಿಧ ಬಣ್ಣಗಳಿಂದ ಗಾತ್ರಗಳಲ್ಲಿ ತಯಾರಿಸುತ್ತಾರೆ. ಉತ್ಸವಗಳಿಗೆ ಬಳಸುವ ಮೇಣದ ಬತ್ತಿಗಳು ವಿವಿಧ ಬಣ್ಣಗಳಿಂದ ಕೂಡಿರುತ್ತವೆ. ಗಾತ್ರದಲ್ಲಿ ೪ ಸೆಂ.ಮೀ. ನಿಂದು ಹಿಡಿದು ೧೫ ಸೆಂ.ಮೀ. ವರೆಗೆ ಮೇಣಬತ್ತಿಗಳು ಇರುತ್ತವೆ. ಸಾಮಾನ್ಯವಾಗಿ ದುಂಡಾಕಾರದಲ್ಲಿ ತಯಾರಾಗುವುದು. ದೀಪಾವಳಿಯಲ್ಲಿ ಮೇಣದಬತ್ತಿ ಹಚ್ಚದ ಮನೆಗಳೇ ಇಲ್ಲ. ಹುಟ್ಟು ಹಬ್ಬದ ಆಚರಣೆ ಮೇಣದಬತ್ತಿ ಬೆಳಗಿಸುವುದರಿಂದಲೇ ಪ್ರಾರಂಭವಾಗುತ್ತದೆ. ಆದ್ದರಿಂದ ಮೇಣಬತ್ತಿಯೂ ಒಂದು ಗೃಹ ಬಳಕೆಯ ವಸ್ತುವಿನಂತೆ ಪ್ರಮುಖ ಸ್ಥಾನಪಡೆದಿದೆ. ಮಾರುಕಟ್ಟೆಯಲ್ಲಿ ಉತ್ತಮ

ಬೇಡಿಕೆಯಿರುವುದರಿಂದ ಪಿಂಜಾರ ಸಮುದಾಯದವರು ಉತ್ತಮ ಜೀವನ ನಡೆಸಲು ಅವಕಾಶವಾಗಿದೆ ಎಂದು ಹೇಳಬಹುದು.

ನಿರ್ದಿಷ್ಟ ಪ್ರಮಾಣದಲ್ಲಿ ತೂಕ ಮಾಡಿ ಫ್ಯಾರಾಫಿನ ಮೇಣವನ್ನು ಒಂದು ಅಲ್ಯೂಮಿನಿಯಂ ಪಾತ್ರೆಯಲ್ಲಿ ಹಾಕಿ ಚೆನ್ನಾಗಿ ಕರಗಿಸಬೇಕು. ನಂತರ ಅಲ್ಯೂಮಿನಿಯಂ ಅಚ್ಚಿನಲ್ಲಿ ಲ್ಯೂಬ್ರಿಕೇಟಿಂಗ್ ಎಣ್ಣೆಯನ್ನು ಬ್ರಶ್‌ನಿಂದ ಹಚ್ಚಿ ದಾರವನ್ನು ಸರಿಯಾಗಿ ಮಧ್ಯ ಭಾಗದಲ್ಲಿ ಸೇರಿಸಿ ಗಟ್ಟಿಯಾಗಿ ಎರಡು ಪಕ್ಕದಲ್ಲಿ ಕಟ್ಟಬೇಕು. ನಂತರ ಕರಗಿಸಿದ ಮೇಣವನ್ನು ಅಲ್ಯೂಮಿನಿಯಂ ಅಚ್ಚಿನಲ್ಲಿ ನಿಧಾನವಾಗಿ ಸುರುವಬೇಕು. ನಂತರ ಗಟ್ಟಿಯಾಗಿ ಸ್ಕ್ರೂ ಹಾಕಿ ಅಚ್ಚನ್ನು ಹಾಗೆ ೧೫-೨೨ ನಿಮಿಷ ತಂಪುಗೊಳಿಸಬೇಕು. ಮೇಣ ಬತ್ತಿಯನ್ನು ಗಟ್ಟಿಯನ್ನು ನಂತರ ಸ್ಕ್ರೂ ಬಿಚ್ಚಿ ಬ್ಲೇಡ್ ಸಹಾಯದಿಂದ ಯಾವ ಅಳತೆಯ ಮೇಣಬತ್ತಿ ಬೇಕಾಗಿದೆಯೇ ಅಷ್ಟೇ ಅಳತೆ ಇಟ್ಟು ಕತ್ತರಿಸಿ ಅರಲು ಬೀಡಬೇಕು. ಸರಿಯಾಗಿ ಆರಿದ ನಂತರ ರಟ್ಟಿನ ಪೆಟ್ಟಿಗೆಯಲ್ಲಿ ವಿವಿಧ ಪ್ರಮಾಣದಲ್ಲಿ ಫ್ಯಾಕ್ ಮಾಡಿ ಮಾರುಕಟ್ಟೆಗೆ ಕಳುಹಿಸುತ್ತಾರೆ.

**೪೪. ಬಾಂಡೆ ಪುಡಿ ತಯಾರಿಕೆ:** ಇತ್ತಿತ್ತಲಾಗಿ ಆಧುನಿಕ ಗೃಹೋಪಕರಣಗಳನ್ನು ಬಳಸುತ್ತಿರುವುದರಿಂದ ಹೋಟೆಲ್ ಮನೆಗಳಲ್ಲಿ ಪಾತ್ರೆಗಳನ್ನು ತಿಕ್ಕಲು ಇದು ಅವಶ್ಯಕವಾದ ವಸ್ತುವಾಗಿದೆ. ಇಂಥ ಕಡಿಮೆ ಬೆಲೆಯಲ್ಲಿ ಪಾತ್ರೆಗಳನ್ನು ಹಸನುಗೊಳಿಸುವ ಪದಾರ್ಥ ಬೇರೆ ಯಾವುದು ಇಲ್ಲ. ಮಾರುಕಟ್ಟೆಯಲ್ಲಿ ಸಾಕಷ್ಟು ಬೇಡಿಕೆ ಇದ್ದು ಪ್ರತಿನಿಧಿಗಳ ಮೂಲಕ ಕಿರಾಣಿ ಅಂಗಡಿಗಳ ಮೂಲಕ ಬಳಕೆದಾರರಿಗೆ ಪೂರೈಸಲು ಸಾಧ್ಯವಿದೆ. ನಮ್ಮ ಪಿಂಜಾರರಿಗೆ ಇದರಲ್ಲಿ ನಿವ್ವಳ ಲಾಭ ದೊರಕುವುದರಿಂದ ಇದರ ನಿರ್ವಹಣೆಗೆ ಯಾವುದೇ ತರಹದ ತೊಂದರೆ ಬರುವುದಿಲ್ಲ ಎನ್ನುತ್ತಾರೆ. ಅಗತ್ಯ ಕಚ್ಚಾಸಾಮಗ್ರಿಗಳು ಸಮೀಪದ ಮಾರುಕಟ್ಟೆಯಲ್ಲಿಯೇ ಲಭ್ಯವಿರುವುದರಿಂದ ನಿರಂತರವಾಗಿ ಉದ್ದಿಮೆಯನ್ನು ನಡೆಸುತ್ತವೆ ಎಂದು ಹೇಳುತ್ತಾರೆ.

**೪೫. ಬ್ರೆಡ್ ತಯಾರಿಸುವುದು:** ಇಂದು ಪಿಂಜಾರರು ತಮ್ಮ ಮೂಲ ವೃತ್ತಿಯನ್ನು ವಿವಿಧ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದರೆ ಬ್ರೆಡನ್ನು ವಿವಿಧ ರೂಪದಲ್ಲಿ ಸಿದ್ಧ ಆಹಾರವಾಗಿ ಉಪಯೋಗಿಸುತ್ತಾರೆ. ಅವಸರದ ಮೇಳಿಗೆ, ಮಕ್ಕಳಿಗೆ ರೋಗಿಗಳಿಗೆ ಇದು ಹಗುರವಾದ ಹಾಗೂ ಪೌಷ್ಠಿಕ ಆಹಾರವಾಗಿದೆ. ಇತ್ತಿತ್ತಲಾಗಿ ಬಹಳ ಕಾಲ ೨ ರಿಂದ ೩ ದಿನ ಬ್ರೆಡ್ ಕೆಡದಂತೆ ತಯಾರಿಸುವರು. ಇದರಲ್ಲಿ ಮೈದಾ ಹಿಟ್ಟು, ಸಕ್ಕರೆ ಡಬ್ಬಾ, ಹಾಲಿನ ಪುಡಿ, ಉಪ್ಪು, ಯೀಸ್ಟ್, ಯಾಲಕ್ಕಿ, ಪಪ್ಪಾಯಿ ತಯಾರಿಸುತ್ತಾರೆ. ಇಂದು ಬ್ರೆಡ್ಡಿನ ಬೇಡಿಕೆ ಹೆಚ್ಚಾಗಿರುವುದಕ್ಕೆ ಕಾರಣ, ಬ್ರೇಡ್ ಬೇಗನೆ ಜೀರ್ಣವಾಗುತ್ತದೆ. ಅಲ್ಲದೆ ಸಮಯಕ್ಕೆ ಸುಲಭವಾಗಿ ದೊರೆಯುತ್ತದೆ. ಬ್ರೆಡ್‌ನ್ನು ಉಪಯೋಗಿಸುವುದು ಸುಲಭ. ಒಮ್ಮೊಮ್ಮೆ

ಹಾಗೆಯೂ ತಿನ್ನಬಹುದು. ಈ ಕಾರಣಗಳಿಂದಲೇ ಬ್ರೆಡ್ ಒಂದು ಮುಖ್ಯ ಆಹಾರ ಪದಾರ್ಥವಾಗಿದೆ.

**೪೬. ಬೆಣ್ಣೆ ಬಿಸ್ಕೆಟ್:** ಇಂತಹ ಸಣ್ಣಪುಟ್ಟ ಕೆಲಸಗಳನ್ನು ಮಾಡಿ ಈ ಪಿಂಜಾರ ಸಮುದಾಯದವರು ತಮ್ಮ ಜೀವನವನ್ನು ಸುಲಭವಾಗಿ ಸಾಗಿಸುತ್ತಾರೆ. ಈ ಬೆಣ್ಣೆ ಬಿಸ್ಕಿಟ್‌ನಲ್ಲಿ ಸಕ್ಕರೆ, ಡಾಲ್ಡಾ, ಮೈದಾ, ತಿನ್ನು ಸೋಡಾ, ಇನ್ನಿತರೇ ಅವಶ್ಯಕವಾದ ವಸ್ತುಗಳನ್ನು ಹಾಕಿ ತಯಾರಿಸುತ್ತಾರೆ. ಇಂದು ಇದರ ಬೇಡಿಕೆ ಮಾರುಕಟ್ಟೆಯಲ್ಲಿ ಹೆಚ್ಚಿದೆ.

**೪೭. ಅಂಟು ತಯಾರಿಸುವುದು:** ಕಾಗದದ ಪಾಕೀಟ್, ರಟ್ಟಿನ ಪೆಟ್ಟಿಗೆ, ಪುಸ್ತಕಗಳ ತಯಾರಿಕೆಯಲ್ಲಿ ಅಂಟು ಬಹಳ ಉಪಯುಕ್ತವಾದ ಪದಾರ್ಥ. ಶಾಲೆ ಕಾಲೇಜು, ಆಫೀಸು, ಅಂಚೆ ಕಚೇರಿ, ಚಿಕ್ಕ ಉದ್ದಿಮೆಗಳಲ್ಲಿ ಅಂಟಿನ ಅವಶ್ಯಕತೆ ತುಂಬ ಇದೆ. ದಿನನಿತ್ಯದ ಬಳಕೆಯಲ್ಲಿ ಮೈದಾಹಿಟ್ಟು ಅಥವಾ ಇನ್ನಾವುದೇ ಯುಕ್ತ ಹಿಟ್ಟನ್ನು ನೀರಿನಲ್ಲಿ ಕೂಡಿಸಿ ಬಿಸಿ ಮಾಡುವುದರಿಂದ ಜಿಗುಟಾದ ಪದಾರ್ಥ ತಯರಾಗುತ್ತದೆ. ಆಫೀಸುಗಳಲ್ಲಿ ಉಪಯೋಗಿಸುವ ಅಂಟು ಉತ್ತಮ ಗುಣಮಟ್ಟವನ್ನು ಹೊಂದಿರುವ ಅವಶ್ಯಕತೆ ಬಹಳ ಇದೆ. ಇತ್ತಿತ್ತಲಾಗಿ ಮಾರುಕಟ್ಟೆಯಲ್ಲಿ ವಿವಿಧ ನಮೂನೆಯ ಅಂಟಿಗೆ ತುಂಬಾ ಬೇಡಿಕೆ ಇದೆ. ಸ್ಟಾರ್ಚ್, ನೀರು, ಕಾಸ್ಟಿಕ್ ಸೋಡಾ, ಬೋರಾಕ್ಸ್ ಉಪ್ಪು ಹಾಕಿ ಇದನ್ನು ತಯಾರಿಸುತ್ತಾರೆ. ನಿತ್ಯೋಪಯುಕ್ತವಾದ ಮಾರುಕಟ್ಟೆಯಲ್ಲಿ ಹೆಚ್ಚಿನ ಬೇಡಿಕೆ ಇರುವುದರಿಂದ ಈ ಅಂಟಿನ ತಯಾರಿಕೆಯಲ್ಲಿ ಈಪಿಂಜಾರ ಸಮುದಾಯದವರು ಪಾಲ್ಗೊಂಡಿದ್ದಾರೆ.

**೪೮. ಫೇಸ್ ಪೌಡರ್:** ಮಾನವನು ಇತರರಿಗಿಂತ ತಾನು ಸುಂದರವಾಗಿರಬೇಕೆಂದು ಆಸೆ ಪಡುವುದು ಸಹಜ. ಹೆಂಗಸರಲ್ಲಿ ಈ ಗುಣ ಇನ್ನೂ ಅಧಿಕವಾಗಿರುತ್ತದೆ. ಆಧುನಿಕ ಮಹಿಳೆಯರಂತೂ ಪೌಡರ್ ಹಚ್ಚದೆ ಹೊರಗೆ ಹೋಗುವುದೇ ವಿರಳ. ಫೇಸ್ ಪೌಡರ್ ಇದು ಮುಖದ ಕಾಂತಿಯನ್ನು ಹೆಚ್ಚಿಸುವುದಲ್ಲದೇ ಚರ್ಮದ ಮೇಲೆ ಬೆವರು ಬರದಂತೆ ಬೆವರನ್ನು ಹೀರಿಕೊಳ್ಳುತ್ತದೆ. ದೇಹವನ್ನು ಹೊಲಸು ವಾಸನೆಯಿಂದ ಮುಕ್ತಗೊಳಿಸುತ್ತದೆ. ವಿದೇಶಗಳಲ್ಲಿ ಇಡೀ ಶರೀರಕ್ಕೂ ಇಂತಹ ಸುಗಂಧ ಪುಡಿಯನ್ನು ಹಾಕಿಕೊಳ್ಳುತ್ತಾರೆ. ಸ್ಟಾರ್ಚ, ಟಾಲ್ಕಂಪೌಡರ್, ಮೆಗ್ನಿಸಿಯಂ ಕಾರ್ಬೋನೇಟ್, ಬೋರಿಕ್ ಪೌಡರ್ ಗುಲಾಬಿ ಬಣ್ಣ, ಅತ್ತರ್, ಲೆವೆಂಡರ್ ಎಣ್ಣೆ, ಇವೆಲ್ಲವುಗಳನ್ನು ಬೆರೆಸಿ ಫೇಸ್ ಪೌಡರ್ ತಯಾರಿಸುತ್ತಾರೆ.

**೪೯. ವ್ಯಾಸಲೀನ್ ತಯಾರಿಸುವುದು:** ಚಳಿಗಾಲದಲ್ಲಿ ಒಣ ಹವೆಯಿಂದ ಬಿರಿಯುವ ಚರ್ಮಕ್ಕೆ ರಕ್ಷಣೆಯನ್ನು ಕಾಂತಿಯನ್ನು ಒದಗಿಸುವ ಪೆಟ್ರೋಲಿಯಂ ವಸ್ತು ಇದನ್ನು ಮುಖ್ಯವಾಗಿ ಮೇಣ ಮತ್ತು ಪೆಟ್ರೋಲಿಯಂ ಜೆಲ್ಲಿಯಿಂದ ತಯಾರಿಸುತ್ತಾರೆ. ಮೇಣ ಮತ್ತು

**೫೦. ಕೋಲ್ಡ್ ಕ್ರೀಮ್:** ಚಳಿಗಾಲದಲ್ಲಿ ಮುಖ ಮೈ ಎಲ್ಲ ಬಿರಿಯುತ್ತದೆ. ಅದನ್ನು ಹಾಗೆ ಬಿಡುವುದರಿಂದ ಚರ್ಮ ಸುಕ್ಕಗಟ್ಟಿ ನಿಸ್ತೇಜವಾಗಿ ಕಾಣುತ್ತದೆ. ಆದರೆ ಮುಖಕ್ಕೆ ಯಾವುದೇ ವಿಧದ ಕೋಲ್ಡ್ ಕ್ರೀಮ್ ಹಚ್ಚುವುದರಿಂದ ಮುಖ ಮೈ ಬಿರಿಯುವುದಿಲ್ಲ ಮತ್ತು ಚರ್ಮದ ಮೇಲ್ಮೈ ಹೊಳಪಾಗಿ ಕಾಣಿಸುತ್ತದೆ. ಸೂರ್ಯನ ಬಿಸಿಲು ಮತ್ತು ಶಾಖದಿಂದ ಕೋಲ್ಡ್ ಕ್ರೀಮ್ ಚರ್ಮವನ್ನು ರಕ್ಷಿಸುತ್ತದೆ. ಆಲ್ ಮಂಡಲ್ ಎಣ್ಣೆ, ಲೀನಾಲಿಕ್, ಬಿಳಿಯ ಮೇಣ, ಸ್ಪರ್ನೆ ಸಿಟಿ, ಬೋರಾಕ್ಸ್, ಗುಲಾಬಿ ಅತ್ತರ, ದಿ ಸ್ಪಿಟ್ಸ್ ನೀರಿನಿಂದ ತಯಾರಿಸುತ್ತಾರೆ. ಪಿಂಜಾರ ಸಮುದಾಯದವರು ಈ ಕೆಲಸ ಮಾಡಲು ಹೆಚ್ಚು ಹಣವನ್ನು ಹಾಕಲು ಬೇಕಾಗುವುದಿಲ್ಲ. ಅದಕ್ಕಾಗಿ ನಾವು ಇದನ್ನು ಮಾಡುತ್ತೇವೆ ಎಂದು ಹೇಳುತ್ತಾರೆ.

**ಹೇರ್ ಆಯಿಲ್:** ಇಂದು ಜನರು ಆಧುನಿಕತೆಗೆ ಮಾರುಹೋಗುವುದಕ್ಕೆ ಹೆಚ್ಚು ಇರುವ ವಸ್ತುವಿಗೆ ಬಣ್ಣ, ಸುವಾಸನೆ ಸೇರಿಸಿದರೆ ಅದು ಅನೇಕ ಜನರನ್ನು ಆಕರ್ಷಿಸುತ್ತದೆ. ಉತ್ಪಾದನೆಗೆ ಒಳ್ಳೆಯ ಪ್ರಚಾರ, ಪ್ಯಾಕಿಂಗ್ ಅಗತ್ಯ. ಹಳೆ ಮಧ್ಯವನ್ನೇ ಹೊಸ ಬಾಟ್ಲಿಯಲ್ಲಿ ಹಾಕಿದಾಗ ಹೆಚ್ಚಿಗೆ ವ್ಯಾಪಾರ ಆಗುತ್ತದೆ. ಅಂದ ಹಾಗೆ ಆಧುನಿಕ ಸೋಗಿಗೆ ಮಾರು ಹೋಗಿರುವವರೇ ಹೆಚ್ಚು. ಆದ್ದರಿಂದ ಕಾಲಕ್ಕೆ ತಕ್ಕಂತೆ ತಾಳ ಹಾಕುವ ಉದ್ಯಮಿಗಳು ಹೇರ್ ಆಯಿಲ್‌ನಂತಹ ಉದ್ಯಮವನ್ನು ಪ್ರಾರಂಭಿಸಿ ಸರಳ ವಿಧಾನದಿಂದ ಅಧಿಕ ಲಾಭ ಪಡೆಯುವರು. ಶುದ್ಧ ಕೊಬ್ಬರಿ ಎಣ್ಣೆ, ಎಳ್ಳೆಣ್ಣೆ, ಔಡಲ ಎಣ್ಣೆ, ಆಯಲ್ ಕಲರ್, ಸುವಾಸನೆ ದ್ರವ್ಯ ಇವೆಲ್ಲವನ್ನು ಒಂದು ಪಾತ್ರೆಯಲ್ಲಿ ಕಾಯಿಸುತ್ತದೆ. ಅದರಲ್ಲಿ ಆಯಿಲ್ ಕಲರ್, ಲಿಂಬೆರಸ, ಯಾವುದಾದರೂ ಪರಿಮಳ ದ್ರವ್ಯವನ್ನು ಬೇಕಾದ ಪ್ರಮಾಣದಲ್ಲಿ ಸೇರಿಸಿ ಚೆನ್ನಾಗಿ ಕದಡುತ್ತಾರೆ. ನಂತರ ೨-೩ ದಿನ ಒಂದು ಗಾಜಿನ ಜಾರಿನಲ್ಲಿ ತುಂಬಿಸಿ ಭದ್ರವಾಗಿ ಬಾಯಿ ಮುಚ್ಚಿಡುತ್ತಾರೆ. ಹೀಗೆ ಹೇರ್ ಆಯಿಲ್ ತಯಾರಿಸುತ್ತಾರೆ.

**ಪಾನೀಯಗಳು:** ಚಿಕ್ಕ ಶೆಡ್‌ಗಳು ಬಾಡಿಗೆಗೆ ಹಿಡಿದು ಬಿಲ್ಡಿಂಗಿನ ಒಂದು ರೂಂನಲ್ಲಿ ನಾಲ್ಕಾರು ಮಿಕ್ಸಿಗಳನ್ನು ಇಟ್ಟುಕೊಂಡು ವಿವಿಧ ಹಣ್ಣಿನ ಜ್ಯೂಸನ್ನು ತಯಾರಿಸಿ ಮಾರಾಟ ಮಾಡುತ್ತಾರೆ. ಬೇಸಿಗೆಯ ಉರಿಬಿಸಿಲಿನಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ನೆನಪಾಗುವುದು

ತಂಪು ಪಾನೀಯಗಳು, ಬೇಸಿಗೆಯ ಕಾಲದಲ್ಲಿ ಚಹಾ-ಕಾಫಿಗಳಿಗಿಂತಲೂ ಇಂತಹ ತಂಪು ಪಾನೀಯಗಳಿಗೆ ಅಧಿಕ ಬೇಡಿಕೆ ಇರುತ್ತದೆ. ಕೇವಲ ನಾಲ್ಕೈದು ತಿಂಗಳಲ್ಲಿ ಒಂದು ವರ್ಷಕ್ಕೆ ಸಾಕಾಗುವಷ್ಟು ಹಣವನ್ನು ಈ ಉದ್ಯಮದಿಂದ ಗಳಿಸಬಹುದು. ಖರ್ಚು ಮಾಡಿದ ದ್ವಿಗುಣ ಹಣವು ಕೆಲವೇ ಗಂಟೆಗಳಲ್ಲಿ ತಿರುಗಿಬರುತ್ತದದೆ. ಕಡಿಮೆ ಬಂಡವಾಳ ಮತ್ತು ಸಾಮಗ್ರಿಗಳಿಂದ ಮನೆಯಲ್ಲಿಯೇ ಈ ಉದ್ಯಮವನ್ನು ಪ್ರಾರಂಭಿಸಬಹುದು. ಆ್ಯಪಲ್, ಆರೆಂಜ್, ಕಲ್ಲಂಗಡಿ, ಸಪೋಟ, ಪೈನಾಪಲ್, ಸೋಡಾ, ಲಿಂಬು, ಶರಬತ್, ಕೋಕಾಕೋಲಾ, ಲೇಮನ್, ಇವು ಪ್ರಮುಖ ಬೇಡಿಕೆ ಇರುವ ತಂಪು ಪಾನೀಯಗಳು. ಸಕ್ಕರೆ, ಲಿಂಬುರಸ, ತಿನ್ನುವ ಹಣ್ಣುಗಳು, ಸೋಡಾ ಗ್ಯಾಸ್, ನೀರು ಇವೆಲ್ಲವನ್ನೂ ಹಾಕಿ ಮಿಶ್ರಣವನ್ನು ಮಾಡುವುದರಿಂದ ಸೋಡಾ ರೆಡಿ ಆಗುತ್ತದೆ.

**ಶಾಂಪು ತಯಾರಿಕೆ:** ನೈಸರ್ಗಿಕವಾಗಿ ಸಿಗುವ ಕೆಲವು ಎಲೆಗಳನ್ನು ಬಳಸಿ ಜೊತೆಗೆ ಕೆಮಿಕಲ್ಸ್ ಶಾಪಿನಲ್ಲಿ ಸಿಗುವ ಲಿಕ್ವಿಡ್ ಬಳಸಿ ಶಾಂಪುವನ್ನು ಸಹ ಪಿಂಜಾರರು ತಯಾರುಸುತ್ತಾರೆ. ಈಗ ಮಾರುಕಟ್ಟೆಯಲ್ಲಿ ಅನೇಕ ವಿಧದ ಶಾಂಪೂಗಳು ಬಂದಿವೆ. ಸ್ವಚ್ಛಗೊಳಿಸುವ ಈ ಲಿಕ್ವಿಡ್ ರೂಪದ ದ್ರವ ಪದಾರ್ಥವೇ 'ಶಾಂಪೂ' ಎಂಬ ನಾಮಾಂಕಿತದಿಂದ ಪ್ರಸಿದ್ಧಿ ಆಗಿದೆ. ಶಾಂಪೂವನ್ನು ಹೆಚ್ಚಾಗಿ ತಲೆ ಕೂದಲನ್ನು ತೊಳೆಯಲು ಉಪಯೋಗಿಸುವುದರಿಂದ ಶಾಂಪೂವಿನ ತಯಾರಿಕೆಯಲ್ಲಿ ತಲೆ ಕೂದಲಿನ ಎಣ್ಣೆಯ ಜಿಡ್ಡನ್ನು ಸ್ವಚ್ಛಗೊಳಿಸುವ ಸ್ವಭಾವವನ್ನು ಹೊಂದಿರಬೇಕಾಗಿರುವುದಷ್ಟೇ ಅಲ್ಲ. ಕೂದಿಲಿನ ಬೆಳವಣಿಗೆಗೆ ಬೇಕಾದ ಪೌಷ್ಠಿಕಾಂಶದಿಂದಲೂ ಕೂಡಿರಬೇಕಾಗುತ್ತದೆ. ತಲೆ ಕೂದಲು ಕಪ್ಪಗೆ ರೇಷ್ಮೆಯಂತೆ ದಟ್ಟವಾಗಿ ಬೆಳೆಯಲು ಪ್ರೋಟಿನು ಜೀವ ಸತ್ವಗಳಗೊಂಡ ರಾಸಾಯನಿಕವನ್ನು ಶಾಂಪೂ ತಯಾರಿಕೆಯಲ್ಲಿ ಬಳಸುವುದು ಮುಖ್ಯ. ಇದರಲ್ಲಿ ಉತ್ತಮ ಕೊಬ್ಬರಿ, ಡಿಸ್ಟಿಲ್ಡ್ ವಾಟರ್, ಕ್ಲಾಸ್ಟಿಕ್ ಪೋಟಾಶ್, ಪೋಟ್ಯಾಸಿಯಂ ಬಳಸುತ್ತಾರೆ. ಇದರಿಂದಲೂ ಕನಿಷ್ಠ ಆದಾಯದಿಂದ ಜೀವನೋಪಾಯವನ್ನು ನಡೆಸುತ್ತಾರೆ.

**ಅಗರಬತ್ತಿಗಳ ತಯರಿಕೆ:** ಪಿಂಜಾರರು ಮನೆಯಲ್ಲೇ ಕೂತು ಊದುಬತ್ತಿ ತಯಾರುಸುತ್ತಾರೆ. ಇದು ಇವರಿಗೆ ದಿನನಿತ್ಯದ ಬದುಕಿನ ಒಂದು ಭಾಗವಾಗಿದೆ. ಪ್ಯಾಕೆಟ್ ಮಾಡಿ ಮಾರಾಟ ಮಾಡುತ್ತಾರೆ. ಕೆ.ಜಿ.ಗಳಲ್ಲೂ ಮಾರುತ್ತಾರೆ. ಒಂದು ಕೆ.ಜಿ. ಅಗರಬತ್ತಿಗೆ ೧೮೦ ರಿಂದ ೨೦೦ ರೂ.ಗಳನ್ನು ತೆಗೆದುಕೊಳ್ಳುತ್ತಾರೆ. ದೇವಾಲಯಗಳಲ್ಲಿ ಸಭೆ, ಸಮಾರಂಭಗಳಲ್ಲಿ, ಮನೆಯಲ್ಲಿ ನಿತ್ಯದ ಪೂಜೆಗಳಿಗೆ ಊದಿನ ಕಡ್ಡಿಯ ಉಪಯೋಗ ಬಹಳವಿದೆ. ಇದು ವಾತಾವರಣವನ್ನು ಪರಿಮಳ ಯುಕ್ತವಾಗಿ ಮಾಡಿ ಮನಸ್ಸಿಗೆ ಉಲ್ಲಾಸ ಉಂಟಾಗುವಂತೆ ಮಾಡುತ್ತದೆ. ಹೊಲಸು ವಾಸನೆಯಿಂದ ವಾತಾವರಣವನ್ನು ಮುಕ್ತಗೊಳಿಸುವ ಕಾರ್ಯ

ಅಗರಬತ್ತಿಯದಾಗಿದೆ. ಬೇರೆ ಬೇರೆ ಅಳತೆಯಲ್ಲಿ ಬಣ್ಣದಲ್ಲಿ ಮಾರುಕಟ್ಟೆಯಲ್ಲಿ ದೊರೆಯುತ್ತದೆ. ಜನರ ಬೇಡಿಕೆಗೆ ತಕ್ಕಂತೆ ಅದರಲ್ಲಿ ಪರಿಮಳ ದ್ರವ್ಯವನ್ನು ಹಾಕುವರು. ಗಂಧದ ಎಣ್ಣೆಯಿಂದ ತಯಾರಿಸಿದ ಊದಿನಕಡ್ಡಿಗೆ ವಿದೇಶಗಳಿಂದಲೂ ಬೇಡಿಕೆ ಇದೆ. ಮೈಸೂರು ಮೊದಲಿನಿಂದಲೂ ಅಗರಬತ್ತಿ ಉದ್ದಿಮೆಗೆ ಪ್ರಸಿದ್ಧವಾಗಿದೆ. ಇದ್ದಿಲುಪುಡಿ, ಅಂಟಿನಪುಡಿ, ಸುವಾಸನೆಯ ದ್ರವ್ಯ, ಬಿದರಿನ ಕಡ್ಡಿ, ನೀರು ಇವೆಲ್ಲವನ್ನು ೧೦೦ ಗ್ರಾಮ. ಮೆಶ್ ಜರಡಿಯಲ್ಲಿ ಚೆನ್ನಾಗಿ ಗಾಳಿಸಬೇಕು. ಎಲ್ಲಾ ಪದಾರ್ಥಗಳನ್ನು ಪ್ಲಾಸ್ಟಿಕ್ ಬುಟ್ಟಿಯಲ್ಲಿ ಹಾಕಿ ನೀರು ಸೇರಿಸಿ ಕಲಸಿ ರಾಡಿ ತಯಾರಿಸಬೇಕು. ಪರಿಮಳ ದ್ರವ್ಯ ಪುಡಿ ಅಥವಾ ಘನ ಪದಾರ್ಥವಾದರೆ ಅದನ್ನು ಇದರೊಂದಿಗೆ ಸೇರಿಸಿ ರಾಡಿ ತಯಾರಿಸಬೇಕು. ನಂತರ ಬಿದಿರಿನ ಕಡ್ಡಿಗೆ ಕಟ್ಟಿಗೆಯ ಪ್ಯಾಕಿನಿಂದ ರೋಲಿಂಗ್ ಮಾಡಿ ಮಿಶ್ರಣದ ರಾಡಿಯನ್ನು ಅಂಟಿಸಬೇಕು. ನಂತರ ಜಿನಗಾದ ಡಸ್ಟಿಂಗ್ ಪುಡಿಯಿಂದ ಕೈಗೆ ಅಂಟದಂತೆ ಧೂಳೀಕರಿಸಬೇಕು. ಆ ನಂತರ ಗಾಳಿಯಲ್ಲಿ ಆರಲು ಬಿಡಬೇಕು. ಪರಿಮಳ ದ್ರವ್ಯವು ದ್ರವವಾದರೆ ಈಗ ಪರಿಮಳ ದ್ರವದಲ್ಲಿ ಒಣಗಿದ ಕಡ್ಡಿಯನ್ನು ನೆನಸಿ, ಕಟ್ಟುಗಳನ್ನು ಕಟ್ಟಬೇಕು. ಬೇರೆ ಬೇರೆ ಪ್ರಮಾಣದಲ್ಲಿ ಮಾರಾಟಕ್ಕೆ ಗ್ರಾಹಕ್ಕೆ ಅನುಕೂಲತೆಗೆ ತಕ್ಕಂತೆ ಕಟ್ಟುಗಳನ್ನು ಕಟ್ಟಿ ಪ್ಲಾಸ್ಟಿಕ್ ಚೀಲದಲ್ಲಿ ಭದ್ರಪಡಿಸಿ ನಂತರ ಮಾರಾಟಕ್ಕೆ ಕಳುಹಿಸುತ್ತದೆ.

**೪.೫. ಪಿಂಜಾರ ಸಮುದಾಯದ ಪ್ರಸ್ತುತ ಸ್ಥಿತಿಗತಿ**

ರಾಯಚೂರು ಜಿಲ್ಲೆಯಲ್ಲಿ ಪಿಂಜಾರ ಸಮುದಾಯವು ಸಾಮಾಜಿಕ ಮತ್ತು ಆರ್ಥಿಕವಾಗಿ ತೀರಾ ಹಿಂದುಳಿದು ದುರ್ಬಲ ಸ್ಥಿತಿಯಲ್ಲಿರುವ ಸಮುದಾಯಗಳಲ್ಲಿ ಈ ಸಮುದಾಯವು ಒಂದಾಗಿದೆ. ಈ ಸಮುದಾಯದ ಕನಿಷ್ಟ ಜೀವನಮಟ್ಟವನ್ನು ಆರ್ಥಿಕವಾಗಿ ಮೇಲೆತ್ತಲು ಘನಸರ್ಕಾರವು ಇತರ ಹಿಂದುಳಿದ ಪಂಗಡಗಳಿಗೆ ಪ್ಯಾಕೇಜು ಪ್ರಕಟಿಸಿರುವಂತೆ ನಮ್ಮ ಸಮುದಾಯಕ್ಕೂ ವಿಶೇಷ ಪ್ಯಾಕೇಜುಗಳನ್ನು ರೂಪಿಸಿ ಕಾರ್ಯರೂಪಕ್ಕೆ ತರಬೇಕು. ಈ ಸಮುದಾಯವು ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಕರ್ನಾಟಕದ ಪ್ರಗತಿ ಪಥದಲ್ಲಿ ಪಾಲ್ಗೊಳ್ಳಲು ಪ್ರೋತ್ಸಾಹಿಸಬೇಕು. ಆಗ ಆರ್ಥಿಕ ಪರಿಸ್ಥಿತಿಯಿಂದ ಶೈಕ್ಷಣಿಕ ಹಾಗೂ ಸಾಮಾಜಿಕ ಸ್ಥಿತಿಗತಿಗಳಿಂದಲೂ ಮುಂದೆ ಬರುತ್ತದೆ.

ಪಾರಂಪರಿಕ ವೃತ್ತಿಯು ಇಂದು ಆಧುನಿಕ ಯಂತ್ರೋಪಕರಣಗಳು ದೊಡ್ಡ ಪ್ರಮಾಣದಲ್ಲಿ ಗಾದಿ, ಹಗ್ಗ, ದಿಂಬುಗಳನ್ನು ಆಧುನಿಕ ರೀತಿಯಲ್ಲಿ ತಯಾರಿಸಲು ಪ್ರಾರಂಭಿಸಿರುವುದರಿಂದ ಈ ವೃತ್ತಿಯನ್ನು ಅವಲಂಬಿಸಿರುವ ಈ ಜನಾಂಗ ಉದ್ಯೋಗ ಇಲ್ಲದೇ ಇಂದು ಬಳಲಿಬೆಂಡಾಗುತ್ತಿದ್ದಾರೆ. ಉದ್ಯೋಗ ಅರಸಿ ಪಟ್ಟಣದತ್ತ ಹೆಜ್ಜೆ ಹಾಕುತ್ತಿದ್ದಾರೆ. ಮನೆ ಮಾರುಗಳನ್ನು ಬಿಟ್ಟು ಹೋಗದವರು ಪಟ್ಟಣದ ವ್ಯಾಪಾರಿಗಳ ಬಳಿ

ತಮಗೆ ಬೇಕಾಗುವ ಕಚ್ಚಾ ವಸ್ತುಗಳಾದ ನೂಲು, ಬಣ್ಣ, ಅರಳಿ ಮುಂತಾದವುಗಳನ್ನು ಹೆಚ್ಚು ಬೆಲೆ ತೆತ್ತು ಖರೀದಿಸಿ ನೂಲಿನಿಂದ ಹಗ್ಗ, ಹರಳೆಯಿಂದ ಗಾದಿ, ದಿಂಬುಗಳನ್ನು ತಯಾರಿಸಿ ಅದೇ ವ್ಯಾಪಾರಿಗಳಿಗೆ ಕಡಿಮೆ ಬೆಲೆಗೆ ಮಾರುವ ಇವರು ವ್ಯಾಪಾರಿಗಳ ಕಪಿಮುಷ್ಟಿಯಲ್ಲಿ ಬಳಲುತ್ತಿದ್ದಾರೆ. ದೈನಂದಿನ ಜೀವನ ದುಸ್ತರ ಸ್ಥಿತಿಯಲ್ಲಿ ಬದುಕು ಸಾಗಿಸುತ್ತಿದ್ದಾರೆ. ಈ ಬಡತನವು ಅವರ ಮಕ್ಕಳು ಶೈಕ್ಷಣಿಕವಾಗಿಯೂ ಹಿಂದುಳಿಯುವಂತೆ ಮಾಡುತ್ತಿದೆ.

ರಾಯಚೂರು ಜಿಲ್ಲೆಯಲ್ಲಿ ಸಮೀಕ್ಷೆ ಮಾಡಿದಾಗ ಸುಮಾರು ೨೦ ರಿಂದ ೨೫ ಸಾವಿರ ಪಿಂಜಾರ ಸಮುದಾಯದ ಜನಸಂಖ್ಯೆ ಇದೆ ಎಂಬುದು ತಿಳಿದುಬಂದಿದೆ. ಇವರ ಸದ್ಯದ ಚಟುವಟಿಕೆಯನ್ನು ಗಮನಿಸಿದಾಗ ಮೂರು /ನಾಲ್ಕು ರೀತಿಯಲ್ಲಿ ಈ ಸಮಾಜದ ಚಿತ್ರಣವನ್ನು ಕೊಡಬಹುದು.

**ಪಿಂಜಾರ ವೃತ್ತಿ ಸಂಬಂಧ ಅಂಶಗಳು**

ರಾಜ್ಯಾದ್ಯಂತ ಕೇವಲ ೧೫ ಲಕ್ಷಕ್ಕಿಂತಲೂ ಸ್ವಲ್ಪ ವ್ಯತ್ಯಾಸವಿರುವ ಜನಸಂಖ್ಯೆ ಇದ್ದು, ಇವರ ಸ್ಥಿತಿ ಗಂಭೀರವಾಗಿದೆ. ನಿತ್ಯದ ದುಡಿಮೆಯನ್ನೇ ಅವಲಂಬಿಸಿ ಬದುಕುತ್ತಿದ್ದಾರೆ. ಇನ್ನೂ ತೀರ ಹಿಂದುಳಿದ ಪ್ರದೇಶ ಮತ್ತು ಹಿಂದುಳಿದ ಜಾತಿಯಾಗಿರುವ ಪಿಂಜಾರರು ರಾಯಚೂರು ಜಿಲ್ಲೆಯಲ್ಲಿ ಶೋಚನೀಯ ಸ್ಥಿತಿಯನ್ನು ಅನುಭವಿಸುತ್ತಿದ್ದಾರೆ. ಈಗಲೂ ಸಹ ಸಮುದಾಯದ ಜನರು ಈ ಕೆಳಗಿನಂತೆ ಬದುಕುತ್ತಿದ್ದಾರೆ.

೧. ಸಂಪ್ರದಾಯಬದ್ಧ ವೃತ್ತಿಯನ್ನೇ ಅವಲಂಬಿಸಿರುವುದು

೨. ಪರ್ಯಾಯ ವೃತ್ತಿಗಳಲ್ಲಿ ತೊಡಗಿ ಸ್ವಾವಲಂಬಿ ಜೀವನ ನಡೆಸುವುದು

೩. ಕೃಷಿ ಮತ್ತು ಕೃಷಿ ಸಂಬಂಧಿತ ಉತ್ಪಾದನೆಯಲ್ಲಿ ತೊಡಗಿರುವಿಕೆ

೪. ಮಹಿಳೆಯರು ಸಹ ಒತ್ತಾಸೆಯಿಂದ ಪಿಂಜಾರ ಸಮುದಾಯದ ಕೆಲಸಗಳಲ್ಲಿ ಭಾಗಿಯಾಗಿರುವುದು

೫.ಮಹಿಳೆ-ಪುರುಷರು ಕಲಾತ್ಮಕ ಸಂಸ್ಕೃತಿಯ ಸಾಮಾಜಿಕ ಬದುಕಿನ ಆಸರೆಯಾಗಿ ಬದುಕುವವರಿದ್ದಾರೆ.

೬. ಬಾಲ್ಯದಿಂದ ವೃದ್ಧಾಪ್ಯದವರೆಗೂ ನಿರಂತರ ಕರ್ಮಜೀವಿಗಳು.

೭. ಸೋಮಾರಿತನ, ಆಲಸ್ಯತನಕ್ಕೆ ಅವಕಾಸವಿಲ್ಲದ ಜಾತಿ.

ಬಹುವೃತ್ತಿ ಬಲ್ಲವರಾದ್ದರಿಂದ ಯಾವ ಪ್ರದೇಶದಲ್ಲಾದರೂ ಸ್ವಾಭಿಮಾನದಿಂದ

ಬದುಕಬಲ್ಲರು. ಇವರ ವೃತ್ತಿ ನೈಪುಣ್ಯತೆ ಬದುಕನ್ನು ಗಟ್ಟಿಗೊಳಿಸಿದೆ. ಆದರೆ ಇತರೆ ವರ್ಗಗಳಂತೆ ಆರ್ಥಿಕವಾಗಿ ತುಂಬ ಮೇಲ್ಮಟ್ಟದಲ್ಲಿ ಬದುಕಲು ಇಷ್ಟಾಗಿಯೂ ಆಗುತ್ತಿಲ್ಲ. ಕೆಲವು ಭಾಗಗಳಲ್ಲಿ ಶ್ರೀಮಂತರ ಪಿಂಜಾರರು ಇದ್ದಾರೆ. ಆದರೆ ದುರ್ಬಲ ಪಿಂಜಾರರು ಶ್ರೀಮಂತ ಪಿಂಜಾರರ ಸಹಾಯ ಪಡೆಯುವುದು ಇಲ್ಲ.

ಇವರ ಪ್ರಸ್ತುತ ಸ್ಥಿಗತಿಯನ್ನು ಈ ಕೆಳಗಿನ ಅಂಶಗಳ ಮೂಲಕವು ಗ್ರಹಿಸಬಹುದು.

೧. ಸಾಮಾಜಿಕ ಸ್ಥಿತಿಗತಿ

೨. ಧಾರ್ಮಿಕ ಸ್ಥಿತಿಗತಿ

೩. ಆರ್ಥಿಕ ಸ್ಥಿತಿಗತಿ

೪. ರಾಜಕೀಯ ಸ್ಥಿತಿಗತಿ

೫. ಶೈಕ್ಷಣಿಕ ಸ್ಥಿತಿಗತಿ

೬. ಸಾಂಸ್ಕೃತಿಕ ಸ್ಥಿತಿಗತಿ

**೧. ಸಾಮಾಜಿಕ ಸ್ಥಿತಿಗತಿ**

ಗ್ರಾಮೀಣ ಜೀವನವನ್ನು ಹೆಚ್ಚು ಅವಲಂಬಿತರಾಗಿದ್ದಾರೆ. ನಗರ ವ್ಯಾಪಾರ ಮತತು ಇತರ ಸಂದರ್ಭದಲ್ಲಿ ಗೂಳೆ ಹೋಗುವವರು ಇದ್ದಾರೆ. ಹಳ್ಳಿಗಳಲ್ಲಿ ನಿಷ್ಠವಂತ ದುಡಿಮೆಗಾರರಾಗಿ ತಮ್ಮ ಇರುವಿಕೆಯನ್ನು ಸಾಬೀತು ಪಡಿಸಿದ್ದಾರೆ. ಗ್ರಾಮೀಣ ಪ್ರದೇಶದ ಮೇಲ್ಜಾತಿಗಳಿಗೆ ಆಧೀನವಾಗಿಯೇ ದುಡಿಮೆ ಮಾಡುತ್ತಾರೆ. ಅವರ ಜೀವನ ವಿಧಾನ, ವೃತ್ತಿ ಕೌಶಲ್ಯತೆ ಇತರ ಜನಾಂಗದ ಜೊತೆ ಹೊಂದಿಕೊಳ್ಳುವ ಸ್ವಭಾವ ಅತ್ಯಂತ ವಿಸ್ಮಯವಾಗಿದೆ. ಒಮ್ಮೊಮ್ಮೆ ಸಾಮಾಜಿಕವಾಗಿ ತೀವ್ರ ಹಲ್ಲೆಗೆ ಒಳಗಾಗಿರುವ ಸಂದರ್ಭಗಳು ಇರುವುದಾಗಿ ತಿಳಿದುಬಂದಿದೆ. ಹಳ್ಳಿಗಳಲ್ಲಿ ಹೆಚ್ಚೆಂದರೆ ಐದಾರು ಕುಟುಂಬಗಳು ಪಿಂಜಾರರವು ಇರುತ್ತವೆ.

**೨. ಧಾರ್ಮಿಕ ಸ್ಥಿತಿಗತಿ**

ಪಿಂಜಾರ ಜನಾಂಗವು ಕೋಮು ಸೌಹಾರ್ದತೆಯ ಒಂದು ರೂಪವಾಗಿದೆ. ಹಿಂದೂ – ಮುಸ್ಲಿಂ ಎರಡೂ ಧಾರ್ಮಿಕ ಪರಂಪರೆಯನ್ನು ಮೈಗೂಡಿಸಿಕೊಂಡಿರುವ ಸಮುದಾಯವಾಗಿದೆ. ಮೋಹರಂ, ರಂಜಾನ್, ಬಕ್ರೀದ್ ಹಬ್ಬಗಳನ್ನು ಆಚರಿಸುತ್ತದೆ. ಕೆಲವು ಹಳ್ಳಿಗಳಲ್ಲಿ ಹಿಂದೂ ಧರ್ಮಕ್ಕೆ ಸಂಬಂಧಿಸಿದ ಜಾತ್ರೆ, ಹಬ್ಬ–ಹರಿದಿನಗಳನ್ನು ಇವರು ಸಹ ಮಾಡುತ್ತಿದ್ದಾರೆ. ಆದರೆ ದೇವಾಲಯಗಳಿಗೆ ಪೂಜೆ ಪುನಸ್ಕಾರಕ್ಕೆ ಹೋಗುವ ಕೆಲವರು ಸಿಗುತ್ತಾರೆ.

ಆದರೆ ಬಹುತೇಕವಾಗಿ ಹಿಂದೂ ಪ್ರಭಾವಕ್ಕೆ ಒಳಗಾಗಿಲ್ಲ. ಇಸ್ಲಾಂ ಧರ್ಮದಲ್ಲಿ ಒಂದು ಉಪಪಂಗಡವಾಗಿ ಬೆಳೆದು ಬಂದ ನಂತರ ಧಾರ್ಮಿಕ ಶ್ರದ್ಧೆಯಲ್ಲಿ ಅತೀ ನಂಬಿಕೆಯುಳ್ಳವರು. ಅಲ್ಲಾನ ನಾಮಸ್ಮರಣೆಯ ಜೊತೆಗೆ ಇತರ ಧರ್ಮದ ತತ್ವಸಿದ್ಧಾಂತಗಳನ್ನು ಪ್ರೇರೇಪಿಸುತ್ತಾರೆ. ಇಷ್ಟಾಗ್ಯೂ ಒಮ್ಮೊಮ್ಮೆ ಮೂಲಭೂತವಾದಿಗಳ ಕಪಿಮುಷ್ಟಿಯಿಂದಾಗಿ ಕೋಮುಗಲಭೆಗಳಿಗೆ ಒಳಗಾಗುತ್ತಿದ್ದಾರೆ. ಇದೇ ಇವರಿಗೆ ಧಾರ್ಮಿಕ ಕಿರುಕುಳವಾಗಿಯೇ ಕಾಣುತ್ತಿದೆ. ೨೦೦೯ರ ಗಣಪತಿ ಉತ್ಸವದಲ್ಲಿ ಇದರ ಕರಾಳ ಛಾಯೆಯನ್ನು ಈಗಲೂ ನೆನಪಿಸಿಕೊಳ್ಳುತ್ತಾರೆ. ಧಾರ್ಮಿಕವಾಗಿ ಪದೇ ಪದೇ ಹಲ್ಲೆಗೆ ಒಳಗಾಗುವುದನ್ನು ಕಾಣಬಹುದು. ಮುಸ್ಲಿಂ ಮೇಲ್ವರ್ಗದವರು ಆಚರಿಸುವ ರಂಜಾನ್-ಬಕ್ರಿದ್ ಹಬ್ಬಗಳಲ್ಲಿ ದಾನ ಮಾಡುವಾಗ ಪಿಂಜಾರರಿಗೆ ಹೇಳಿಕಳುಹಿಸಿ ಅವರು ಬಂದಾಗ ಬಟ್ಟೆ, ಹಣ, ದವಸಧಾನ್ಯ, ಸಿಹಿ ಪದಾರ್ಥಗಳನ್ನು ದಾನ ಮಾಡುತ್ತಾರೆ. ಇದು ಮುಸ್ಲಿಂ ಒಳಪಂಗಡವಾದರೂ ದಾನವನ್ನು ಸ್ವೀಕರಿಸುವುದು ಧಾರ್ಮಿಕವಾಗಿ, ಆರ್ಥಿಕವಾಗಿ ಕೆಳಮಟ್ಟವನ್ನು ಸೂಚಿಸುತ್ತದೆ.

**೩) ಶೈಕ್ಷಣಿಕ ಸ್ಥಿತಿಗತಿ**

ಪಿಂಜಾರ ಜನಾಂಗದ ಶೈಕ್ಷಣಿಕ ಮಟ್ಟವನ್ನು ಗಮನಿಸಿದಾಗ ಶೇಕಡ ೯೦ರಷ್ಟು ಇನ್ನೂ ಅನಕ್ಷರಸ್ಥರು ಬಡತನವನ್ನು ಅನುಭವಿಸುತ್ತಾ, ಆದಾಯ ಬಂದಾಗ ಸಿರಿತನವನ್ನು ಅನುಭವಿಸುತ್ತ ಬಾಳುವ ಅರ್ಧ ಮಧ್ಯಮ ವರ್ಗಕ್ಕೆ ಸೇರಿದ ಪಂಗಡ ದುಡಿದು ಹಣವನ್ನು ಸಂಗ್ರಹಿಸಿಕೊಂಡು 'ವಿದ್ಯಾಭ್ಯಾಸಕ್ಕೆ' ಬರುವವರಿದ್ದಾರೆ.

ಲಿಂಗಸ್ಗೂರು ತಾಲೂಕಿನ 'ಭೂಪೂರು' ಗ್ರಾಮದ ದೌವಲ್‌ಸಾಬ್ ಇವರು ಎರಡು ವರ್ಷಗಳ ಕಾಲ ಹೈದ್ರಾಬಾದ್‌ನಲ್ಲಿ ಸೆಕ್ಯುರಿಟಿ ಟ್ರೇನಿಂಗ್ ಮಾಡಿರುತ್ತಾರೆ. ನಂತರ ಸದ್ಯ ಇವರು ಪಿ.ಎಚ್.ಡಿ.ಯನ್ನು ಕನ್ನಡ ಸಾಹಿತ್ಯದಲ್ಲಿ ಸಂಶೋಧನೆ ಮಾಡುತ್ತಿದ್ದಾರೆ. ಡಿ.ವೈ.ಉಪ್ಪಾರ್ ಕಂಪನಿಯಲ್ಲಿ ಸ್ಟೋರ್ ಕೀಪರ್, ನೆಮ್ಮದಿ ಕೇಂದ್ರದಲ್ಲಿ ಕಂಪ್ಯೂಟರ್ ಆಪರೇಟರ್ ಆಗಿ ಕೆಲಸವನ್ನು ನಿರ್ವಹಿಸಿ, ನಂತರ ಹಣ ಸಂಗ್ರಹಿಸಿಕೊಂಡು ಮುಂದಿನ ವ್ಯಾಸಂಗವನ್ನು ಮಾಡುತ್ತಿದ್ದಾರೆ.

ಹಣವಿಲ್ಲದೆ ಎಷ್ಟೋ ವಿದ್ಯಾಭ್ಯಾಸ ವಂಚಿತ ಯುವಕರು ಇದ್ದಾರೆ. ಇತ್ತೀಚಿನ ದಿನಗಳಲ್ಲಿ ಅನೇಕ ಬೇರೆ ಬೇರೆ ಸಮುದಾಯದ ಶಾಲಾ-ಕಾಲೇಜುಗಳು ಪ್ರಾರಂಭವಾಗಿವೆ. ಆದರೆ ಪಿಂಜಾರ ಸಮುದಾಯಕ್ಕೆ ಸಂಬಂಧಿಸಿದ ಶಾಲೆಗಳನ್ನು ಇದೇ ಸಮುದಾಯದವರು ಪ್ರಾರಂಭಿಸಿಲ್ಲ.

ಜೂನಿಯರ್ ಇಂಜಿನಿಯರ್ ಆಗಿ ಮಹಿಬೂಬ್‌ಸಾಬ್ ಲಿಂಗಸ್ಗೂರುನಲ್ಲಿದ್ದಾರೆ. ಶರೀಫ್‌ಸಾಬ್‌ರವರು ಪಿ.ಎಚ್.ಡಿ. ಅಧ್ಯಯನಕಾರರಾಗಿದ್ದಾರೆ. ಮುಸ್ತಫ ಹುಸೇನ್ ಕಲ್ಮಾಲಾ

ಸಮಾಜ ಕಾರ್ಯ (ಎಮ್‌ಎಸ್‌ಡಬ್ಲ್ಯು) ಮಾಡಿ ಸದ್ಯ ಗುಮಾಸ್ತರಾಗಿದ್ದಾರೆ. ಲಿಂಗಸ್ಗೂರು ತಾಲೂಕಿನ ಮಟ್ಟದ ಗ್ರಾಮದವರಾದ ದವಲಸಾಬ್ ದೇವನಾಂಪ್ರಿಯ ಅಶೋಕ ಸ್ನಾತಕೋತ್ತರ ಕೇಂದ್ರ ಮಸ್ಕಿಯಲ್ಲಿ ಪ್ರಾಂಶುಪಾಲರಾಗಿದ್ದಾರೆ.

**೪) ಆರ್ಥಿಕ ಸ್ಥಿತಿಗತಿ**

ಪಿಂಜಾರ ಸಮುದಾಯವು ಬಡತನದ ಜೀವನಕ್ಕೆ ಹೊಂದಿಕೊಂಡಿದ್ದಾರೆ. ಪಿಂಜಾರ ಸಮುದಾಯದವರು ತಲೆತಲಾಂತರಗಳಿಂದ ನಡೆಸಿಕೊಂಡು ಬಂದಿರುವ ಈ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗಲಾರದೆ, ಅತ್ತ ಬಿಡಲೂ ಆಗದ ಸ್ಥಿತಿಯನ್ನು ಅನುಭವಿಸುತ್ತಿದ್ದಾರೆ. ಗುಂಡುಸಾಗರದ 'ದವಲಸಾಬ್' ಅವರು ಬಡಗಿ ವೃತ್ತಿಯನ್ನು ಕೈಗೊಂಡಿದ್ದಾರೆ. ಇವರಿಗೆ ಗಾದಿ, ದಿಂಬುಗಳನ್ನು ಪೂರ್ವಿಕರು ಮಾಡುತ್ತಿದ್ದ ಬಗ್ಗೆ ತಿಳಿದುಬಂದಿಲ್ಲ. ಕದ, ಬಾಗಿಲು, ಕಿಟಕಿ, ಮೇಜು, ಹಲಗೆ, ಅಟ್ಟಗಳನ್ನು ಮಾಡುತ್ತಾರೆ. ಚದರಕ್ಕೆ ಇಷ್ಟು ಹಣವೆಂದು ಪಡೆದು ಕೆಲಸ ಮಾಡಿಕೊಡುತ್ತಾರೆ.

ಪಾರಂಪರಿಕ ಕಸುಬನ್ನು ಮುಂದುವರೆಸುವವರು ಇದ್ದಾರೆ. ಹಾಸಿಗೆಗಳನ್ನು ತಯಾರಿಸಲು ಹತ್ತಿಯನ್ನು ಖರೀದಿಸುತ್ತಾರೆ. ಹೆಚ್ಚುತ್ತಿರುವ ಬಾಡಿಗೆ, ಕುಗ್ಗುತ್ತಿರುವ ಹಾಸಿಗೆಗಳ ಬೇಡಿಕೆ ಇನ್ನೂ ಸಂಕಷ್ಟಕ್ಕೀಡು ಮಾಡಿದೆ.

ಪರ್ಯಾಯ ಕಸುಬುಗಳನ್ನು ಅವಲಂಬನೆ ಮಾಡಿಕೊಂಡಿರುವುದರಿಂದ ಜೀವನೋಪಾಯಕ್ಕೆ ಒಂದು ದಾರಿಯಾಗಿದೆ. ಇವತ್ತಿನ ಪಿಂಜಾರರ ಆರ್ಥಿಕ ಸ್ಥಿತಿಗತಿ ಅಂದಂದಿನ ಜೀವನಾಧಾರಕ್ಕಾಗಿ ದುಡಿಮೆ ಇದೆಯೇ ಹೊರತು ಭವಿಷ್ಯತ್ತಿನಲ್ಲಿ ಕುತ್ತು ಅನುಭವಿಸಲು ಅಷ್ಟರಮಟ್ಟಿಗೆ ಸುಧಾರಿಸಿಲ್ಲ.

**೫) ರಾಜಕೀಯ ಸ್ಥಿತಿಗತಿ**

ಪಿಂಜಾರರು ಮುಸ್ಲಿಂ ಅಲ್ಪಸಂಖ್ಯಾತರಲ್ಲಿಯೇ ಅಲ್ಪಸಂಖ್ಯಾತರು. ಇವರ ರಾಜಕೀಯ ಇತಿಹಾಸ ಅಷ್ಟಿಲ್ಲ. ಗ್ರಾಮಪಂಚಾಯಿತಿ ಅಧ್ಯಕ್ಷರು, ಸದಸ್ಯರು ಆಗಿದ್ದಾರೆ. ಮಹಮ್ಮದ್ ಇಸ್ಮಾಯಿಲ್ ಮಾಜಿ ಪುರಸಭೆ ಅಧ್ಯಕ್ಷರು ಮಾನವಿಯಲ್ಲಿ ಆಗಿದ್ದಾರೆ. ಚಾಂದ್‌ಸಾಬ್ ಮುಳ್ಳೂರು ರಾಯಚೂರಿನ ಜಿಲ್ಲಾಪಂಚಾಯತ್ ಸದಸ್ಯರಾಗಿದ್ದಾರೆ.

ಮಹಿಬೂಬ್ ಸಾಬ್ ಸಿಂಧನೂರು ನಗರಸಭೆಯ ಮಾಜಿ ಉಪಾಧ್ಯಕ್ಷರಾಗಿದ್ದರು.

ಪಿಂಜಾರರು ರಾಜಕೀಯವಾಗಿ ಇನ್ನೂ ಒಗ್ಗೂಡಬೇಕಾದ ಅಗತ್ಯವಿದೆ. ಕರ್ನಾಟಕ ರಾಜ್ಯ ನದಾಫ್ ಪಿಂಜಾರ ಸಂಘ(ರಿ) ಶಿವಮೊಗ್ಗದಲ್ಲಿ ಅಸ್ತಿತ್ವಕ್ಕೆ ಬಂದರೂ ರಾಜ್ಯದ ಎಲ್ಲ ಪಿಂಜಾರರನ್ನು 'ಪಿಂಜಾರ ರಾಜ್ಯ ಸಮ್ಮೇಳನ'ದಲ್ಲಿ ಒಗ್ಗೂಡಿಸುತ್ತದೆ.

### ೫) ಸಾಂಸ್ಕೃತಿಕ ಸ್ಥಿತಿಗತಿ

ಹಿಂದೂಗಳ ಭಜನಾ ಕಾರ್ಯಕ್ರಮದಲ್ಲಿ ಪಿಂಜಾರರು ಸಹಭಾಗಿಗಳಾಗಿ ಇರುತ್ತಾರೆ. ಆದರೆ ಭಜನ ಸಂಘಗಳು ಇಲ್ಲ. ಪಿಂಜಾರರು ಬುರ್ಖಾ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಮೊಹರಂ ಹಬ್ಬದಲ್ಲಿ ಹಾಡುವ ರಿವಾಯತು ಪದಗಳನ್ನು ಹಾಡುತ್ತಾರೆ. ಹೆಣ್ಣುಮಕ್ಕಳು 'ಖುರಾನ್' ಪಠಣ ದಿನನಿತ್ಯ ಮಾಡುತ್ತಾರೆ. ಧರ್ಮದ ನಿಯಮಗಳನ್ನು ಗಾಢವಾಗಿ ಪಾಲಿಸುತ್ತಲಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ಆರಿಪ್‌ರಾಜಾ, ಶರಿಫ್ ಹಸಮ್‌ಕಲ್ ಮುಂತಾದವರು ಕಾವ್ಯರಚನೆಯಲ್ಲಿ ತೊಡಗಿದ್ದಾರೆ.

ಒಟ್ಟಿನಲ್ಲಿ ರಾಯಚೂರು ಜಿಲ್ಲೆಯಲ್ಲಿನ ಪಿಂಜಾರ ಜನಾಂಗದ ಸಾಮಾಜಿಕ ಸ್ಥಿತಿಗತಿಯು ಅಷ್ಟೇನು ಪ್ರಗತಿ ಕಂಡಿಲ್ಲವೆಂದು ಹೇಳಬಹುದು. ಗ್ರಾಮೀಣ ಭಾಗದಲ್ಲಿ ಬದುಕುವ ಈ ಜನಾಂಗವು ಯಾವ ಕ್ಷೇತ್ರದಲ್ಲಿ ಪ್ರಗತಿ ಹೊಂದದೆ ಬಡತನದ ಬೇಗೆಯಲ್ಲಿ ನರಳುತ್ತಿದ್ದಾರೆ. ನಗರ ಪ್ರದೇಶ ಜನಾಂಗಕ್ಕೆ ಹೋಲಿಸಿದರೆ ಗ್ರಾಮೀಣ ಪ್ರದೇಶದ ಜನಾಂಗ ಸಾಮಾಜಿಕ ಜೀವನ ಅತ್ಯಂತ ಶೋಚನೀಯವಾಗಿದೆ. ಆದರೆ ಈ ಜನಾಂಗದಲ್ಲಿ ಮುಂದುವರೆದವರು ಸರಕಾರದ ಸೌಲಭ್ಯಗಳನ್ನು ಒದಗಿಸಲು ಶ್ರಮಪಡಬೇಕೆಂದು ಅವರಲ್ಲಿ ಕೋರಿಕೆ.

### ೪.೬. ಪಿಂಜಾರ ಸಮುದಾಯದ ಅಭಿವೃದ್ಧಿಗೆ ರೂಪಿಸಬೇಕಾದ ಕಾರ್ಯಕ್ರಮಗಳು

- ಪಿಂಜಾರರ ಸಮುದಾಯದಲ್ಲಿ ಉನ್ನತ ವ್ಯಾಸಂಗ ಮಾಡುತ್ತಿರುವವರಿಗೆ ವಿದ್ಯಾರ್ಥಿ ವೇತನ ಕೊಡುವುದು.

- ಕೇಂದ್ರ ಮತ್ತು ರಾಜ್ಯಸರ್ಕಾರಗಳು ಮುಸ್ಲಿಂ ಸಮುದಾಯಕ್ಕೆ ರೂಪಿಸಿರುವ ಯೋಜನೆಗಳಲ್ಲಿ ಮುಸ್ಲಿಂ ಒಳಪಂಗಡವಾದ ನದಾಫ್/ಪಿಂಜಾರ ಸಮುದಾಯಕ್ಕೆ ಈ ಯೋಜನೆಗಳು ತಲುಪುತ್ತಿಲ್ಲ. ರಾಜ್ಯ ಸರ್ಕಾರವು ಕೊಡಮಾಡುವ ಜಾತಿ/ಆದಾಯ ಪ್ರಮಾಣ ಪತ್ರವು ಪಿಂಜಾರರು ಪ್ರವರ್ಗ–Iಕ್ಕೆ ಸೇರಿದ್ದು, ಆದರೆ ಮುಸ್ಲಿಂ ಸಮುದಾಯವು IIಬಿ ಜಾತಿ ಆದಾಯ ಪ್ರಮಾಣ ಪತ್ರ ಹೊಂದಿದೆ. ಸರ್ಕಾರ ಒದಗಿಸುವ ಅಲ್ಪಸಂಖ್ಯಾತ ಸವಲತ್ತುಗಳು ಮುಸ್ಲಿಂ ಸಮುದಾಯಕ್ಕೆ ಸೇರಿವೆ. ಅವುಗಳಿಂದ ಪಿಂಜಾರ ಸಮುದಾಯವು ಪ್ರವರ್ಗ–Iನ್ನು ಹೊಂದಿರುವ ಕಾರಣದಿಂದ ಈ ಸೌಲಭ್ಯಗಳಿಂದ ವಂಚಿತವಾಗಿದೆ. ಕೇಂದ್ರದಲ್ಲಿ ಓಬಿಸಿ ಎಂದು ಗುರುತಿಸಿದಾಗ ಕೇಂದ್ರದ ಸವಲತ್ತುಗಳು ಮಾತ್ರ ಸಮರ್ಪಕವಾಗಿ ದೊರಕುತ್ತಿವೆ. ಆದರೆ ರಾಜ್ಯದಲ್ಲಿ ಪ್ರವರ್ಗ–I ಮತ್ತು IIಬಿ ಗಳ ಸವಲತ್ತುಗಳಲ್ಲಿ ಪಿಂಜಾರರಿಗೆ ದ್ವಂದ್ವಾತ್ಮಕ ಸಮಸ್ಯೆಗಳು ಕಾಡುತ್ತಿವೆ.

▪ ಪಾರಂಪರಿಕ ಕಸುಬನ್ನು ಮುಂದುವರೆಸಿಕೊಂಡು ಬರುತ್ತಿರುವ ಪಿಂಜಾರರಿಗೆ ಆರ್ಥಿಕ ಸಹಾಯದ ಅಗತ್ಯ ಇನ್ನೂ ಹೆಚ್ಚಾಗಬೇಕಿದೆ.

▪ ಪಿಂಜಾರ/ ನದಾಫ್ ಸಂಘವು ಪಿಂಜಾರರನ್ನು ಪ್ರವರ್ಗ–Iರಿಂದ ಪರಿಶಿಷ್ಟ ಪಂಗಡಕ್ಕೆ ಸೇರಿಸುವಂತೆ ಒತ್ತಾಯಿಸುತ್ತಿದ್ದಾರೆ. ಇದನ್ನು ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ.

▪ ಆರೋಗ್ಯ, ಶಿಕ್ಷಣ, ವಸತಿ, ನೀರು, ಮೂಲಭೂತ ಸೌಕರ್ಯ ಮತ್ತು ಆರ್ಥಿಕ ಸುಧಾರಣೆಯತ್ತ ಮುನ್ನಡೆಯಲು ಸರ್ಕಾರವು ಯೋಜನೆಗಳನ್ನು ರೂಪಿಸಬೇಕಿದೆ.

▪ IIಬಿ ಯಲ್ಲಿರುವ ಸವಲತ್ತುಗಳು ಪ್ರವರ್ಗ–Iರಲ್ಲಿ ಸಿಗುತ್ತಿಲ್ಲ. ಅಲ್ಪಸಂಖ್ಯಾತ ವಿದ್ಯಾರ್ಥಿ ವೇತನವು IIಬಿಗೆ ದೊರೆಯುತ್ತಿದ್ದು, ಮುಸ್ಲಿಂರ ಒಳಪಂಗಡವೇ ಆದ ಪಿಂಜಾರರಿಗೆ ದೊರಕುತ್ತಿಲ್ಲ. ಕಾರಣ ಪ್ರವರ್ಗ–Iನ್ನು ಅಲೆಮಾರಿ ಸಮುದಾಯದವರೆಂದು ಗುರುತಿಸಿದರು. ಅಲೆಮಾರಿ ವಿದ್ಯಾರ್ಥಿ ವೇತನವೂ ದೊರಕುವ ಸಾಧ್ಯತೆ ಇಲ್ಲ. ಹೀಗಾಗಿ ಎರಡೂ ಕಡೆಯಿಂದಲೂ ಪಿಂಜಾರ ಸಮುದಾಯವು ಸವಲತ್ತುಗಳಿಂದ ವಂಚಿತವಾಗಿದೆ.

**ಕೊನೆ ಟಿಪ್ಪಣಿಗಳು**

೧. ಡಾ. ಕೆ.ಮೋಹನಕೃಷ್ಣ ರೈ, ವಸಾಹತುಶಾಹಿ ಮತ್ತು ನಗರೀಕರಣ, ಪು - ೫೫

೨. ಅದೇ ಪುಟ - ೫೬,೫೭

೩. ಒಡೆಯರು ಡಿ.ಹೆಗ್ಗಡೆ, ಭಾರತದ ಆರ್ಥಿಕಾಭಿವೃದ್ಧಿ, ಪುಟ - ೩೨೦-೩೨೧

# ಅಧ್ಯಾಯ ಐದು

## ಸಮಾರೋಪ

ಪಿಂಜಾರ ಸಮುದಾಯದ ನೋವು, ನಲಿವುಗಳನ್ನು ಗಮನದಲ್ಲಿಟ್ಟುಕೊಂಡು ಅವರ ಸಂಸ್ಕೃತಿಯ ಮತ್ತು ಉಳಿದಿರುವ ಕಸುಬುಗಳ ಬಗ್ಗೆ ಇಲ್ಲಿ ದಾಖಲಿಸಲಾಗಿದೆ. ಪಿಂಜಾರ ಸಮುದಾಯವನ್ನು ಚರ್ಚಿಸಿ ಅವರ ಸಂಸ್ಕೃತಿಯನ್ನೇ ಇನ್ನು ಉಳಿಸಿಕೊಳ್ಳಲು, ಬೆಳಸಿಕೊಳ್ಳಲು ಏನು ಕಾರ್ಯಗಳು ಕೈಗೊಳ್ಳಬೇಕೆಂಬ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಪ್ರಾದೇಶಿಕತೆಯ ಪ್ರಭಾವ ಏನಾದರು ಬೀರಿದೆಯಾ ಎಂದು ನೋಡಿ ಅವರಲ್ಲಿ ಇನ್ನೂ ಹಿಂದುಳಿದ ಕಸುಬಿನ ಬಗ್ಗೆ ಕ್ಷೇತ್ರಕಾರ್ಯದಲ್ಲಿ ಮಾಹಿತಿಯನ್ನು ಪಡೆದು ದಾಖಲಿಸಲಾಗಿದೆ. ಪಿಂಜಾರ ಸಮುದಾಯವು ಕರ್ನಾಟಕದಲ್ಲಿ ಚದುರಿಹೋಗಿದ್ದು, ರಾಯಚೂರು ಜಿಲ್ಲೆಯಲ್ಲಿ ಎಷ್ಟು ಜನಸಂಖ್ಯೆಯನ್ನು ಈ ಸಮುದಾಯ ಹೊಂದಿದೆ ಎಂಬುದನ್ನು ದಾಖಲಿಸಲಾಗಿದೆ. ಈ ಸಮುದಾಯದವರು ಅನೇಕ ಜಿಲ್ಲೆಗಳಲ್ಲಿ ಚದುರಿಹೋಗಿದ್ದು, ಹಲವಾರು, ಭಾಷೆ, ಸಂಸ್ಕೃತಿಯನ್ನು ಅವರ ಜೀವನದಲ್ಲಿ ಅಳವಡಿಸಿಕೊಳ್ಳಲು ಮುಖ್ಯ ಏನುಕಾರಣ ಎಂಬುದನ್ನು ಕುರಿತು ದಾಖಲಿಸಲಾಗಿದೆ. ಈ ಸಮುದಾಯದವರು ಅಷ್ಟೇನು ಸ್ಥಿತಿವಂತರು ಅಲ್ಲದೇ ಇದ್ದು, ಇಂದು ಅನೇಕ ಸಮಸ್ಯೆಗಳನ್ನು ಎದುರಿಸಿ ಪರ್ಯಾಯ ಕಸುಬುಗಳನ್ನು ಅಳವಡಿಸಿಕೊಂಡು ಅನೇಕ ಕೆಲಸಗಳನ್ನು ಮಾಡುವುದನ್ನು ದಾಖಲಿಸಲಾಯಿತು. ಇವರು ಅನೇಕ ವೃತ್ತಿಳನ್ನು ಅವಲಂಬಿಸಿರುವುದರಿಂದ ಬದಲಾವಣೆಗೆ ಅವಕಾಶವಿರುವುದು ಇವರ ಜೀವನ ಪ್ರೀತಿಯನ್ನು ಎತ್ತಿ ತೋರಿಸುತ್ತದೆ. ಪಿಂಜಾರ ಸಮುದಾಯದ ನಂಬಿಕೆಗಳು, ಸಾಂಸ್ಕೃತಿಕ, ಆಚರಣೆಗಳು, ಆರ್ಥಿಕತೆ, ಶೈಕ್ಷಣಿಕತೆ, ಇವೆಲ್ಲವನ್ನು ಇವರ ಮಧ್ಯೆ ಪಡೆದುಕೊಳ್ಳಲು ಉತ್ತಮ ಅವಕಾಶವಾಗಿದೆ. ಪಿಂಜಾರ ಸಮುದಾಯದವರು ತಮ್ಮ ಪಾರಂಪರಿಕ ವೃತ್ತಿಯನ್ನು ಇನ್ನು ಉಳಿಸಿಕೊಳ್ಳಲು, ಬೆಳೆಸಿಕೊಳ್ಳಲು, ಹೆಣಗಾಡುವ ಸ್ಥಿತಿ ಇದೆ. ಈ ಸಮುದಾಯದಲ್ಲಿ ಸಣ್ಣ ಪುಟ್ಟ ಗುಡಿಕೈಗಾರಿಗಳನ್ನು ಮಾಡುತ್ತಿರುವುದನ್ನು ಸಮಾಲೋಚಿಸಿ ದಾಖಲಿಸಲಾಯಿತು. ಪಿಂಜಾರ ಹಿರಿಯರ ಜೊತೆಗೆ ಕುರಿತು ಗಾದಿ, ದಿಂಬುಗಳ ನಿರ್ಮಾಣದ ವೃತ್ತಿಯನ್ನು ಇಲ್ಲಿಯು ಯುವಕರ ಮೇಲೆ ಯಾವ ರೀತಿಯ ಪರಿಣಾಮವನ್ನು ಬೀರಿದೆ ಎಂಬುದನ್ನು ದಾಖಲಿಸಲಾಯಿತು. ಪಿಂಜಾರರು ಇನ್ನು ತಮ್ಮ ಸಮುದಾಯದ ಜೊತೆಗೆ ಆಂತರಿಕವಾಗಿ

ಸರಿಯಾಗಿ ಸೇರಿಕೊಂಡು ಸಂಘಟಿತರಾಗುತ್ತಿಲ್ಲ ಎಂಬುವುದರ ಕುರಿತು ಚರ್ಚಿಸಲಾಯಿತು. ಆದರೂ ಕರ್ನಾಟಕ ರಾಜ್ಯ ನದಾಫ್ ಪಿಂಜಾರರ ಸಂಘ ಇರುವುದನ್ನು ತಿಳಿಸಲಾಯಿತು. ಎಲ್ಲಾ ಸಮುದಾಯದ ಜನರೊಂದಿಗೆ ಹೊಂದಾಣಿಕೆಯ ಸ್ವಭಾವದ ಕುರಿತು ಕೇಳಿದಾಗ ನಮಗೆ ಬೇದಭಾವವಿಲ್ಲ ಎಂದು ಒಪ್ಪಿಕೊಂಡಿರುವುದನ್ನು ದಾಖಲಿಸಲಾಯಿತು. ಪಿಂಜಾರರ ಮೂಲವನ್ನು ಹೋಲುವ ಮುಸ್ಲಿಂ ಅರಸರ ಆಡಳಿತದಲ್ಲಿ ಮತಾಂತರ ಕಾರ್ಯದ ಬಗೆಗೆ ಸಹ ಗುರ್ತಿಸಲಾಗಿದೆ. ಪಿಂಜಾರರನ್ನು ಹೋಲುವ ಕೆಲ ಜಾತಿಯ ಹಿಂದೂಗಳ ಹೆಸರನ್ನು ಸಹ ಗುರ್ತಿಸಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮುಸ್ಲಿಂರು ಪಿಂಜಾರರನ್ನು ಒಂದು ಉಪ ಪಂಗಡವೆಂದು ಕಾಣುವುದನ್ನು ಕುರಿತು ಇಲ್ಲಿ ದಾಖಲಿಸಲಾಗಿದೆ. ಎಲ್ಲಾ ಸಮುದಾಯ ಮಹತ್ವ ಇರುವಂತೆ, ಪಿಂಜಾರರ ಸಮುದಾಯದ ಜನರಿಗೆ ಸಹ ಸಾಂಸ್ಕೃತಿಕವಾಗಿ ಮಹತ್ವದ ಜವಾಬ್ದಾರಿಯಿದೆ. ಎಂಬುವುದನ್ನು ಗುರ್ತಿಸಲಾಗಿದೆ. ಪಿಂಜಾರರು ರಾಯಚೂರು ಜಿಲ್ಲೆಯಲ್ಲಿ ತಮ್ಮ ಮೂಲ ಕಸುಬನ್ನು ಕೈಬಿಟ್ಟಿರುವ ಕುರಿತು ಇಲ್ಲಿ ಚರ್ಚಿಸಲಾಗಿದೆ. ಈ ಜನ ಸಮುದಾಯದವರು ಸ್ವಲ್ಪಮಟ್ಟಿಗೆ ಅಪರೂಪವಾಗಿ ತಮ್ಮ ಮೂಲ ವೃತ್ತಿಯನ್ನು ಮುಂದುವರೆಸಲು ಯಾಕೆ ಸಾಧ್ಯವಾಗಿದೆ. ಹಳ್ಳಿಗಳಲ್ಲಿ ಯಾಕೆ ಸಾಧ್ಯವಾಗುತ್ತಿಲ್ಲ ಎಂಬುದನ್ನು ಕುರಿತು ಚರ್ಚಿಸಲಾಗಿದೆ.

### ೫.೧ ಅಧ್ಯಯನದ ಫಲಿತಗಳು

❖ ಕರ್ನಾಟಕದ ದಕ್ಷಿಣ ಪ್ರದೇಶಕ್ಕಿಂತ, ಉತ್ತರದ ಪ್ರದೇಶದಲ್ಲಿನ ರಾಯಚೂರು ಪ್ರಾಚೀನ ಕಾಲದಿಂದಲೂ ಹೆಚ್ಚು ಜನವಸತಿ ಕೇಂದ್ರವಿದೆ. ಬಯಲು ನಾಡಾಗಿ, ಎರಡು ನದಿಗಳಿಂದ ಕೂಡಿದ್ದು, ಈ ಭೂಪ್ರದೇಶವು ವ್ಯವಸಾಯ ಯೋಗ್ಯ ಭೂಮಿಯನ್ನು ಹೊಂದಿದೆ. ಹತ್ತಿ, ಜೋಳ, ಶೇಂಗಾ ಬೆಳೆಯನ್ನು ಪ್ರಮುಖವಾಗಿ ಬೆಳೆದ ಸಮೃದ್ಧ ಜಿಲ್ಲೆ. ಈ ಜಿಲ್ಲೆಯು ಅನೇಕ ಪ್ರಭುತ್ವಗಳ, ಧರ್ಮಗಳ ಪ್ರಭಾವಕ್ಕೆ ಒಳಗಾಗಿರುವುದು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

❖ ಈ ಪ್ರದೇಶದ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಿದಾಗ ಅನೇಕ ಪ್ರಭುತ್ವಗಳು ಆಳ್ವಿಕೆ ನಡೆಸಿವೆ. ಅವು ತಮ್ಮ ಕಾಲಸಂದರ್ಭದಲ್ಲಿ ಧರ್ಮ, ಕಲೆ, ಸಾಹಿತ್ಯ, ಭಾಷೆ, ಸಂಸ್ಕೃತಿ ಮುಂತಾದವುಗಳ ಬಗ್ಗೆ ಗಂಭೀರವಾದ ನಿರ್ಧಾರಗಳನ್ನು ತೆಗೆದುಕೊಂಡಿದೆ. ಧರ್ಮ ಮತ್ತು ಸಂಸ್ಕೃತಿಯನ್ನು ಈ ನೆಲದಲ್ಲಿ ಬಿತ್ತಲು ಚಾರಿತ್ರಿಕ ಹಿನ್ನೆಲೆ ಏನು? ಎನ್ನುವುದನ್ನು ಚಾರಿತ್ರಿಕವಾಗಿಯೆ ಅವಲೋಕನ ಮಾಡಲಾಗಿದೆ.

❖ ರಾಯಚೂರು ಜಿಲ್ಲೆಯಲ್ಲಿರುವ ಪಿಂಜಾರರು ಹಿಂದೂ-ಮುಸ್ಲಿಂ ಎರಡು ಸಂಸ್ಕೃತಿಗಳಲ್ಲಿ ಬೆರೆತು ಹೋದ ವೈಚಾರಿಕ ಕಾರಣಗಳನ್ನು ಧಾರ್ಮಿಕ ನೆಲೆಯಲ್ಲಿ ಈ ಅಧ್ಯಯನವು ಮಾಡಿದೆ.

❖ ಪಿಂಜಾರರ ಮೂಲವನ್ನು ಸಿಂಧೂ ನಾಗರಿಕತೆಯಿಂದ ಪ್ರಾರಂಭಿಸಿ ಅರಬ್ಬರು, ಟರ್ಕರು, ದೆಹಲಿ ಸುಲ್ತಾನರು, ಮೊಘಲರ ಮೂಲವನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದೆ.

**೫.೨ ಅಧ್ಯಯನದ ಹೆಚ್ಚಿನ ಸಾಧ್ಯತೆಗಳು**

➢ ರಾಯಚೂರು ಜಿಲ್ಲೆಯನ್ನು ಮಾತ್ರ ಅನುಲಕ್ಷಿಸಿ ಕೈಗೊಂಡ ಅಧ್ಯಯನವು ಇದಾಗಿದೆ. ಆದರೆ ಪಿಂಜಾರರನ್ನು ಕುರಿತು "ಹೈದರಾಬಾದ್ ಕರ್ನಾಟಕ ಪಿಂಜಾರರ ಸಾಂಸ್ಕೃತಿಕ ಅಧ್ಯಯನ ಮಾಡಲು ಸಾಧ್ಯತೆ ಇದೆ. ಆಗ ಹೈದರಾಬಾದ್ ಕರ್ನಾಟಕಕ್ಕೆ ಸೇರುವ ಆರು ಜಿಲ್ಲೆಗಳ ಪಿಂಜಾರರನ್ನು ಸಾಂಸ್ಕೃತಿಕವಾಗಿ ಗ್ರಹಿಸಲು ಸಾಧ್ಯವಿದೆ.

➢ ಕರ್ನಾಟಕ ಪಿಂಜಾರರ ಸಮುದಾಯ ಪ್ರಸುತ ಸ್ಥಿತಿಗತಿಗಳನ್ನು ಕುರಿತು ಸಮಗ್ರ ಅಧ್ಯಯನ ಮಾಡುವ ಅಗತ್ಯವು ಇದೆ.

➢ ಹಳೆ ಮೈಸೂರು ಪ್ರಾಂತ್ಯದಲ್ಲಿ ಪಿಂಜಾರರ ಬದುಕು ಮತ್ತು ಹೈದರಾಬಾದ್ ಕರ್ನಾಟಕ ಪಿಂಜಾರರ ಬದುಕಿಗೂ ಸಾಕಷ್ಟು ವ್ಯತ್ಯಾಸಗಳು ಇರುವ ಸಾಧ್ಯತೆ ಇದೆ. ಅದನ್ನು ಗಮನಿಸಿ ತೌಲನಿಕ ಅಧ್ಯಯನ ಕೂಡ ಕೈಗೊಳ್ಳಬಹುದು.

## ಪರಾಮರ್ಶನ ಗ್ರಂಥಗಳು


೧. ಅಬ್ದುಲ್ ಗಫ್ಫಾರ್. ಎಸ್ (ಕನ್ನಡಕ್ಕೆ ಅನವಾದ) ಕುರ್‌ಆನ್ ವ್ಯಾಖ್ಯಾನ, ಶಾಂತಿ ಪ್ರಕಾಶನ ಹಿದಾಯತ್ ಸೆಂಟರ್, ಬೀಬಿ ಅಲಾಬಿ ರಸ್ತೆ, ಮಂಗಳೂರು – ೧೯೯೧.

೨. ಅಮರೇಶ ನುಗಡೋಣಿ, ಹೈದರಬಾದ್ ಕರ್ನಾಟಕದ ಹಾಡು–ಪಾಡು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೩. ಇಬ್ರಾಹೀಮ್ ಸಈದ್ (ಕನ್ನಡಕ್ಕೆ) ಸಹಸ್ರ ಪ್ರವಾದಿ ವಚನಗಳು, ಶಾಂತಿ ಪ್ರಕಾಶನ ಹಿದಾಯತ್ ಸೆಂಟರ್, ಬೀಬಿ ಅಲಾಬಿ ರಸ್ತೆ, ಮಂಗಳೂರು–೨೦೦೫.

೪. ಒಡೆಯರ್ .ಡಿ. ಹೆಗ್ಗಡೆ, ಭಾರತದ ಆರ್ಥಿಕಾಭಿವೃದ್ಧಿ, ಅರ್ಜುನ್ ಪಬ್ಲಿಷಿಂಗ್ ಹೌಸ್ ಮೈಸೂರ್ – ೨೦೦೬.

೫. ಎಸ್. ಗುರುಪ್ರಸಾದ್, ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು, ಎಂ.ಫಿಲ್, ಪದವಿಗಾಗಿ ಕ.ವಿ.ವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ – ೨೦೦೯–೧೦ (ಅಪ್ರಕಟಿತ ಎಂ.ಫಿಲ್. ನಿಬಂಧ)

೬. ಟಿ.ಜಿ. ಚಂದ್ರಶೇಖರಪ್ಪ, ಮಧ್ಯಕಾಲೀನ ಭಾರತದ ಇತಿಹಾಸ, ಪೂರ್ಣ ಪ್ರಕಾಶನ, ಶಿವಮೊಗ್ಗ–೨೦೦೨

೭. ಡಿ.ಟಿ. ಜ್ಯೋಶಿ, ಮಧ್ಯಯುಗಿನ ಭಾರತದ ಇತಿಹಾಸ ವಿದ್ಯಾನಿಧಿ ಪ್ರಕಾಶನ, ಗದಗ – ೨೦೦೪–೨೦೦೫.

೮. ದಾದಾಪೀರ್ ಬಿ.ಸಿ. ಪಿಂಜಾರರು ಪಿಎಚ್.ಡಿ ಮಹಾಪ್ರಬಂಧ ಕ.ವಿ.ವಿ. ೨೦೦೩.

೯. ದಾದಾಫೀರ್ ಬಿ.ಸಿ. ಪಿಂಜಾರರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ೧೯೯೩–೨೦೧೧

೧೦. ದಿವ್ಯ ಕುರ್‌ಆನ್ ಅನುವಾದಕ ಮಂಡಲಿ,(ಕನ್ನಡಕ್ಕೆ) ದಿವ್ಯ ಕುರ್‌ಆನ್, ಪ್ರಕಾಶಕರು ಇಸ್ಲಾಮಿ ಸಾಹಿತ್ಯ ಪ್ರಕಾಶನ ಕರ್ನಾಟಕ ಬೆಂಗಳೂರು–೧೯೭೮–೧೯೮೧.

೧೧. ಪವಿತ್ರ ಕುರ್‌ಆನ್, ಭಾವಾನುವಾದ, ಎಸ್. ಅಬ್ದುಲ್ ರಫ್ಫಾರ್. ಕನ್ನಡಾನುವಾದ ಶಾಂತಿ ಪ್ರಕಾಶನ, ಹಿದಾಯತ್ ಸೆಂಟರ್, ಬೀಬಿ ಅಲಾಬಿ ರಸ್ತೆ, ಮಂಗಳೂರು–೨೦೦೦

೧೨. ಶ್ರೀಮತಿ.ಬಿ.ಆರ್ ಪರಿಣಿತ, ಆಧುನಿಕ ಭಾರತದ ಇತಿಹಾಸ, ಯುನೈಟೆಡ್ ಪಬ್ಲಿಷರ್ಸ್ ಅಲ್ಪೈಮನ್ ಕಾಂಪೌಂಡ, ಜೆಪ್ಪು, ಮಂಗಳೂರು–೨೦೦೪.

೧೩. ಪ್ರಕಾಶ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಮೊಹರಂ ಪದಗಳು ಒಂದು ಅಧ್ಯಯನ, ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನಿಬಂಧ–೨೦೦೭ (ಅಪ್ರಕಟಿತ ಎಂ,ಫಿಲ್ ನಿಬಂಧ)

೧೪. ಫರೇರ್ ಮುಹಮ್ಮದ್ ಕಟ್ಪಾಡಿ, ರಾಷ್ಟ್ರೀಯ ಮತ್ತು ಮುಸ್ಲಿಮರು, ಕೊಟ್ವಾರ ಪ್ರಕಾಶನ– ಮಂಗಳೂರು–೧೯೯೩.

೧೫. ಎಂ. ಮಲ್ಲಿಕಾರ್ಜುನಗೌಡ, ಕರ್ನಾಟಕ–ಆಂಧ್ರದ ಗಡಿಭಾಗದಲ್ಲಿ ಹಿಂದೂ ಮುಸ್ಲಿಂ ಸಾಂಸ್ಕೃತಿಕ ಬಾಂಧವ್ಯ, ಸಮಾಜ ವಿಜ್ಞಾನಗಳ ನಿಕಾಯ ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೬. ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಮಹಾ ಪ್ರಬಂಧ

೧೬. ರಜಿಯಾ ಬಾನು ಕೆ.ಎಸ್, ಮುಸ್ಲಿಂ ಮಹಿಳೆಯರು ಸಾಮಾಜಿಕ ಬದುಕು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನಿಬಂಧ ೨೦೦೮ (ಅಪ್ರಕಟಿಕ ಎಂಫಿಲ್ ನಿಬಂಧ)

೧೭. ರವಿ ಗೋಮ್ಯಾ, ಯಾದಗಿರಿ ಪರಿಸರದ ಮೊಹರಂ ಪದಗಳ ಅನನ್ಯತೆ. ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನಿಬಂಧ–೨೦೦೮ (ಅಪ್ರ)ಕಟಿತ ಎಂ.ಫಿಲ್ ನಿಬಂಧ)

೧೮. ರಹಮತ್ ತರೀಕೆರೆ, ಕರ್ನಾಚಕದ ಸೂಫಿಗಳು ಪ್ರಸಾರಾಂಗ, ಕನ್ನಡ ವಿ.ವಿ ಹಂಪಿ. ವಿದ್ಯಾರಣ್ಯ – ೨೦೦೮.

೧೯. ಡಾ. ರಾಗೌ. ಮಹಿಳಾ ಅಧ್ಯಯನ ಆಯಮಗಳು, ಶ್ರೀಮಯಶೋದಾರಾ ಗೌ ಟ್ರಸ್ಟ್ – ಮೈಸೂರು – ೨೦೦೮.

೨೦. ಡಾ. ಶೈಲಜ ಹಿರೇಮಠ, ಮಹಿಳಾ ಅಧ್ಯಯನ, ಪ್ರಸಾರಾಂಗ ಕ.ವಿ.ವಿ. ಹಂಪಿ – ೨೦೧೧

೨೧. ಷರಿಫಾ ಕೆ. ಮುಸ್ಲಿಂ ಲೋಕದ ತಲ್ಲಣಗಳು ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು, ಗುಲ್ಬರ್ಗಾ – ೨೦೧೧

೨೨. ಷಾಜಹಾನರ, ರಘುನಾಥ ಸ. ಅನು, ಷಜಹಾನರ ನವಾಬ್, ವಿಹಾ ಪುಸ್ತರ ಬೆಂಗಳೂರು ೨೦೧೧

೨೩. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು – ೧೯೭೫–೨೦೧೧.

೨೪. ಡಾ. ಸದಾಶಿವ ಕೆ, ಸಮಗ್ರ ಭಾರತ ಇತಿಹಾಸ, ಪ್ರಿಯಾದರ್ಶಿನಿ, ಮೈಸೂರು ದಕ್ಷಿಣ – ೨೦೦೯

೨೫. ಸ್ಮರಣ ಸಂಚಿಕೆ, ಬೆಳಗು, ಕರ್ನಾಟಕ ರಾಜ್ಯ ನದಾಫ್‌ಪಿಂಜಾರ ಸಂಘ ರಿ ಶಿವಮೊಗ್ಗ – ೨೦೧೨

೨೬. ಪಿ. ಸಾಯಿನಾಥ್, ಅಸಮಾನತೆಯ ಜಾಗತೀಕರಣ ಮತ್ತು ಹಾಳಕೇರಿ ಮುಂಡರಗಿ – ೨೦೧೧

೨೭. ಸೈಯದ್ ಅಬುತ್ ಅಲಾ ಮೌದೂದಿ, ಖುತ್‌ಬಾತ್ ಇಸ್ಲಾಮಿನ ಬುನಾದಿಗಳು, ಶಾಂತಿ ಪ್ರಕಾಶನ, ಹಿದಾಯತ್ ಸೆಂಟರ್, ಬೀಬಿ ಅಲಾಬಿ ರಸ್ತೆ, ಮಂಗಳೂರು–೨೦೦೨

**ವಿಶ್ವಕೋಶಗಳು**

೨೮. ಕರುಕುಶಲ ಕಲೆಗಳು, ಕನ್ನಡವಿಶ್ವವಿದ್ಯಾಲಯ ವಿಶ್ವಕೋಶ, ೨೦೦೦.

೨೯. ಕರ್ನಾಟಕ ಜನಪದ ಕಲೆಗಳ ವಿಶ್ವಕೋಶ, ೧೯೯೬.

೩೦. ಧರ್ಮ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ, ೨೦೦೦.

೩೧. ಚರಿತ್ರೆ, ಕನ್ನಡವಿಶ್ವವಿದ್ಯಾಲಯ ವಿಶ್ವಕೋಶ, ೨೦೦೧

೩೨. ಜಾನಪದ ವಿಷಯ ವಿಶ್ವಕೋಶ, ಸಂಪುಟ–೧, ೨೦೦೬.

## ವಕ್ತೃಗಳ ವಿವರ

| | ಹೆಸರು | ವಯಸ್ಸು | ಜಾತಿ | ವೃತ್ತಿ | ಸ್ಥಳ |
|---|---|---|---|---|---|
| ೦೧. | ಅಜೀಮ್ | ೬೦ | ಪಿಂಜಾರ | ಕೃಷಿ | ರಾಯಚೂರು |
| ೦೨. | ರುಕ್ಕುಮುದ್ದಿನ್ | ೫೫ | ಪಿಂಜಾರ | ಕೂಲಿ | ರಾಯಚೂರು |
| ೦೩. | ಯಾಸ್ಮೀನ್ | ೬೫ | ಪಿಂಜಾರ | ಕೂಲಿ | ರಾಯಚೂರು |
| ೦೪. | ಖಧರ ಷಾಫಿ | ೪೫ | ಪಿಂಜಾರ | ನಿರುದ್ಯೋಗಿ | ರಾಯಚೂರು |
| ೦೫. | ಅಲ್ಲೀಪೀರಾ | ೨೮ | ಪಿಂಜಾರ | ನಿರುದ್ಯೋಗಿ | ಮೀರಾಪುರ |
| ೦೬. | ಬಂದೇನವಾಜು | ೩೮ | ಪಿಂಜಾರ | ವ್ಯಾಪಾರಿ | ಮೀರಾಪುರ |
| ೦೭. | ಗೋರೆಬಂದೇನಾವಾಜ್ | ೩೨ | ಪಿಂಜಾರ | ಕೂಲಿ ಕೆಲಸ | ಮೀರಾಪುರು |
| ೦೮. | ಇಮಾಮ್‌ಸಾಬ್ | ೫೬ | ಪಿಂಜಾರ | ಕೃಷಿ | ಮೀರಾಪುರ |
| ೦೯. | ದಸ್ತಗಿರಿಸಾಬ್ | ೫೦ | ಪಿಂಜಾರ | ಗಾರೆಕೆಲಸ | ರಾಯಚೂರು |
| ೧೦. | ನಬೀಸಾಬ್ | ೬೦ | ಪಿಂಜಾರ | ವ್ಯಾಪಾರ | ರಾಯಚೂರು |
| ೧೧. | ಕಮಲ್‌ಸಾಬ್ | ೫೫ | ಪಿಂಜಾರ | ಗುಡಗಿ | ಮಾನವಿ |
| ೧೨. | ರಫುಸಾಬ್ | ೭೦ | ಪಿಂಜಾರ | ಕೂಲಿ | ಮಾನವಿ |
| ೧೩. | ಖಜಾಹುಸೇನ್ | ೬೬ | ಪಿಂಜಾರ | ಕಾಲಿ | ಮಾನವಿ |
| ೧೪. | ನಿಜಮುದ್ದಿನ್ | ೨೭ | ಪಿಂಜಾರ | ನಿರಾದ್ಯೋಗಿ | ಮಾನವಿ |
| ೧೫. | ಮಿನತ್ ಸಾಬ್ | ೪೦ | ಪಿಂಜಾರ | ಕೂಲಿ | ಮಾನವಿ |
| ೧೬. | ಚಾನ್‌ಪಾಷಿ | ೩೦ | ಪಿಂಜಾರ | ಕೃಷಿ | ಗಾರಲದಿನ್ನಿ |
| ೧೭. | ಶರಿಫ್ ಸಾಬ್ | ೭೦ | ಪಿಂಜಾರ | ಗಾರೆಕೆಲಸ | ಮಾನವಿ |
| ೧೮. | ದೌವುಲ ಸಾಬ್ | ೨೫ | ಪಿಂಜಾರ | ವಿದ್ಯಾಭ್ಯಾಸ | ಲಿಂಗಸ್ಗೂರು |
| ೧೯. | ನಬಿವುದ್ದಿನ್‌ಸಾಬ್ | ೪೦ | ಪಿಂಜಾರ | ಕೃಷಿ | ಸಿಂಧನೂರು |
| ೨೦. | ಅಲ್ಲವುದ್ದಿನ್‌ಸಾಬ್ | ೪೨ | ಪಿಂಜಾರ | ಹಮಾಲಿ | ದೇವದುರ್ಗ |
| ೨೧. | ಬಾಬಾರ್ ಸಾಬ್ | ೪೯ | ಪಿಂಜಾರ | ಮನೆಕೆಲಸ | ದೇವದುರ್ಗ |
| ೨೨. | ನಾಸೀರ್ ಹುಸೇನ್ | ೩೭ | ಪಿಂಜಾರ | ವ್ಯಾಪಾರ | ದೇವಸ್ಗೂರು |
| ೨೩. | ಬಂದುಖಾನ್ | ೩೫ | ಪಿಂಜಾರ | ಕಿರಣಿ | ದೇವಸ್ಗೂರು |
| ೨೪. | ಹಫಿಜುಸಾಬ್ | ೪೫ | ಪಿಂಜಾರ | ಕೂಲಿ | ಲಿಂಗಸ್ಗೂರು |
| ೨೫. | ಮುಸ್ತಾಫ್‌ಹುಸೇನ | ೩೨ | ಪಿಂಜಾರ | ಸರಕಾರಿ ನೌಕರಿ | ಕಲಮಲ |
| ೨೭. | ಫರಿದ್ | ೩೨ | ಪಿಂಜಾರ | ಪೋಸ್ಟ್‌ಮ್ಯಾನ್ | ಕಲ್ಮಲ |
| ೨೮. | ಜಲಿತ್‌ಖಾನ | ೪೫ | ಪಿಂಜಾರ | ಕೂಲಿ | ರಾಯಚೂರು |

| | | | | | |
|---|---|---|---|---|---|
| ೨೯. | ಗೋಕುಲ್‌ಹುಸೇನ್ | ೪೭ | ಪಿಂಜಾರ | ಕೂಲಿ | ರಾಯಚೂರು |
| ೩೦. | ಜುಬೇರ್‌ಸಾಬ್ | ೩೯ | ಪಿಂಜಾರ | ಬಡಗಿ | ರಾಯಚೂರು |
| ೩೧. | ಹಬೀದಸಾಬ್ | ೪೫ | ಪಿಂಜಾರ | ಬಡಗಿ | ರಾಯಚೂರು |
| ೩೨. | ಷರ್ಜನ್ ಬೇಗಂ | ೪೯ | ಪಿಂಜಾರ | ಬಡಗಿ | ರಾಯಚೂರು |
| ೩೩. | ಹುಸೇನ ಮಿಯಾ | ೫೦ | ಪಿಂಜಾರ | ಬಡಗಿ | ಸಿಂಧನೂರು |
| ೩೪. | ಖದರ್ ಹುಸೇನ | ೫೨ | ಪಿಂಜಾರ | ಬಡಗಿ | ಬಳಗನೂರು |
| ೩೫. | ರಹಮತ್‌ಹುಸೇನ್ | ೫೬ | ಪಿಂಜಾರ | ಬಡಗಿ | ಸಿಂಧನೂರು |
| ೩೬. | ದಾದಾಖಲಂದರ | ೩೮ | ಪಿಂಜಾರ | ಬಡಗಿ | ಹಸಮಕಲ್ಲ್ |
| ೩೭. | ರಜಿಯಾಬಾನು | ೪೯ | ಪಿಂಜಾರ | ಬಡಗಿ | ಸಿಂಧನೂರು |
| ೩೮. | ಎಸ್,ಸನಾಲ್ಲವುಲ್ಲ | ೪೩ | ಪಿಂಜಾರ | ಗ್ಯಾರೇಜ್ | ಮಾನವಿ |
| ೩೯. | ಶ್ರೀಮತಿ ವಹಿದಾ.ನ | ೫೩ | ಪಿಂಜಾರ | ಗ್ಯಾರೇಜ್ | ಮಾನವಿ |
| ೪೦. | ಅಬ್ದುಲ್‌ಸಾಬ್ | ೩೬ | ಪಿಂಜಾರ | ಕೂಲಿ | ಮಾನವಿ |
| ೪೧. | ಮಮತಾಜ್‌ಬೇಗಂ | ೬೭ | ಪಿಂಜಾರ | ಕೂಲಿ | ಮಾನವಿ |
| ೪೨. | ಪೀರಸಾಬ್ | ೩೯ | ಪಿಂಜಾರ | ಗ್ಯಾರೇಜ್ | ದೇವದುರ್ಗ |
| ೪೩. | ರೆಹಮಾನ ಎ | ೪೦ | ಪಿಂಜಾರ | ಗ್ಯಾರೇಜ್ | ಅರಿಕೇರಾ |
| ೪೪. | ಮುಲ್ಲಾ ಎನ್.ಎ | ೪೮ | ಪಿಂಜಾರ | ಗ್ಯಾರೇಜ್ | ದೇವದುರ್ಗ |
| ೪೫. | ಫಕ್ರುದ್ದಿನ್. ಚ | ೫೩ | ಪಿಂಜಾರ | ಗ್ಯಾರೇಜ್ | ದೇವದುರ್ಗ |
| ೪೬. | ಇಬ್ರಾಹಿಂ ಸಾಬ್ | ೫೫ | ಪಿಂಜಾರ | ಗ್ಯಾರೇಜ್ | ದೇವದುರ್ಗ |
| ೪೭. | ಇಕ್ಬಾಲಮೊಹಿದ್ದಿನ | ೬೩ | ಪಿಂಜಾರ | ಗ್ಯಾರೇಜ್ | ದೇವದುರ್ಗ |
| ೪೮. | ಮಸ್ತಾನವಲಿ | | ಪಿಂಜಾರ | ಗ್ಯಾರೇಜ್ | ದೇವದುರ್ಗ |
| ೪೯. | ಶಾಬುದ್ದಿನ್ ಸಾಬ | ೩೩ | ಪಿಂಜಾರ | ಬಡಗಿ | ಸಿಂಧನೂರು |
| ೫೦. | ನಜೀರಬಾ | ೩೪ | ಪಿಂಜಾರ | ಬಡಗಿ | ಸಿಂಧನೂರು |
| ೫೧. | ಸುಬಾನಸಾಬ್ | ೩೬ | ಪಿಂಜಾರ | ಬಡಗಿ | ಸಿಂಧನೂರು |
| ೫೨. | ಸುಮ್ರನ್ | ೩೩ | ಪಿಂಜಾರ | ಬಡಗಿ | ಸಿಂಧನೂರು |
| ೫೩. | ಮನ್ಸೂರು | ೫೬ | ಪಿಂಜಾರ | ಕೂಲಿ | ಸಿಂಧನೂರು |
| ೫೪. | ಹಜರತ್ | ೬೦ | ಪಿಂಜಾರ | ಕೂಲಿ | ಸಿಂಧನೂರು |
| ೫೫. | ಜಬ್ಬಾರಖಾನ್ | ೭೧ | ಪಿಂಜಾರ | ಕೂಲಿ | ಸಿಂಧನೂರು |
| ೫೬. | ಅಲ್ಲಿಸಾಬ್ | ೪೦ | ಪಿಂಜಾರ | ಮನೆಗೆಲಸ | ದೇವದುರ್ಗ |
| ೫೭. | ಹಜರತ್ | ೨೯ | ಪಿಂಜಾರ | ಮನೆಗೆಲಸ | ದೇವದುರ್ಗ |
| ೫೮. | ಇರ್ಶಾದ ಅಲಿ | ೩೦ | ಪಿಂಜಾರ | ಮನೆಗೆಲಸ | ದೇವದುರ್ಗ |
| ೫೯. | ಶಮಸುದ್ದಿನ್ | ೪೭ | ಪಿಂಜಾರ | ಕೂಲಿ | ದೇವದುರ್ಗ |
| ೬೦. | ಶೌಕತ ಅಲಿ | ೩೦ | ಪಿಂಜಾರ | ಕೂಲಿ | ದೇವದುರ್ಗ |
| ೬೧. | ಬೆಳ್ಳೇರೆಬುಡೇನಸಾಬ್ | ೪೫ | ಪಿಂಜಾರ | ಕೂಲಿ | ಮಾನವಿ |
| ೬೨. | ಜೈತುನಬಿ | ೩೬ | ಪಿಂಜಾರ | ರೇಷ್ಮೆ | ಮಾನವಿ |

| | | | | | |
|---|---|---|---|---|---|
| ೬೩. | ಜೇ.ಬಷಿರ್‌ಸಾಬ್ | ೪೧ | ಪಿಂಜಾರ | ರೇಷ್ಮೆ | ಮಾನವಿ |
| ೬೪. | ಹುಸೇನ್‌ಮಿಯ್ಯಾ | ೩೮ | ಪಿಂಜಾರ | ಬಡಗಿ | ಲಿಂಗಸ್ಗೂರು |
| ೬೫. | ಹಯಾತ ಕೆ.ನ | ೩೯ | ಪಿಂಜಾರ | ಕೂಲಿ | ಲಿಂಗಸ್ಗೂರು |
| ೬೬. | ಜಬಿವುಲ್ಲಾ | ೪೧ | ಪಿಂಜಾರ | ಕೂಲಿ | ಲಿಂಗಸ್ಗೂರು |
| ೬೭. | ಜಿನ್ನತ ಸಾಬ್ | ೪೮ | ಪಿಂಜಾರ | ಕೂಲಿ | ಲಿಂಗಸ್ಗೂರು |
| ೬೮. | ನಬಿಹುಲ್ಲ | ೫೧ | ಪಿಂಜಾರ | ಕೂಲಿ | ರಾಯಚೂರು |
| ೬೯. | ರೀಯಾಜ್‌ವುದ್ದಿನ | ೬೧ | ಪಿಂಜಾರ | ಕೂಲಿ | ರಾಯಚೂರು |
| ೭೦. | ಮಹಿಬೂಬ್‌ಸಾಬ್ | ೬೩ | ಪಿಂಜಾರ | ಕೂಲಿ | ರಾಯಚೂರು |
| ೭೧. | ದೌವುಲಸಾಬ | ೨೦ | ಪಿಂಜಾರ | ಟೀ ಮಾರುವ ಕೆಲಸ | ರಾಯಚೂರು |

## ಮಾದರಿ ಪ್ರಶ್ನಾವಳಿ

೧. ನಿಮ್ಮನ್ನು ಪಿಂಜಾರರು ಎಂದು ಏಕೆ ಕರೆಯುತ್ತಾರೆ?

೨. ನಿಮ್ಮ ಮೂಲ ಕುಲ ಕಸುಬು ಯಾವುದು?

೩. ನೀವು ಮೂಲತಃ ಹಿಂದೂಗಳ? ಮುಸ್ಲಿಂರ?

೪. ನೀವು ಹಿಂದೂ ಧರ್ಮದವರ ಹಬ್ಬಗಳನ್ನು ಆಚರಿಸುತ್ತಿರಾ?

೫. ಹಾಗಾದರೆ ನೀವು ಹಿಂದೂ ಧರ್ಮದವರ ಹಬ್ಬಗಳನ್ನು ಏಕೆ ಆಚರಿಸುತ್ತಿರಾ?

೬. ನೀವು ವರ್ಷದಲ್ಲಿ ಬರುವ ಯಾವ ಯಾವ ಹಬ್ಬಗಳನ್ನು ಹೆಚ್ಚಾಗಿ ಆಚರಿಸುತ್ತಿರಾ?

೭. ನೀವು ಇನನು ಪಿಂಜಾರರಾಗಿಯೇ ಉಳಿಯಲು ಕಾರಣಗಳೇನು?

೮. ನಿಮ್ಮ ಮದುವೆ ಸಮಾರಂಭಗಳಲ್ಲಿ ಮದುವೆಯ ಆಚರಣೆಗಳು ಯಾವ ರೀತಿಯಲ್ಲಿ ಮಾಡುತ್ತಿರಾ?

೯. ಹಿಂದಿನ ಕಾಲದಲ್ಲಿ ನಿಮ್ಮ ಮಕ್ಕಳಿಗೆ ಮದುವೆಯ ಬಗ್ಗೆ ಹುಡುಗಿಯನ್ನು ನೀವೇ ನೋಡಿ ಬರುತ್ತಿದ್ದರಿ? ಈಗ ಈ ನಿಯಮವನ್ನು ಹುಡುಗರು ಉಲ್ಲಂಘಿಸುತ್ತಾರೆ? ನೀವು ಇದನ್ನು ಒಪ್ಪುತ್ತಿರಾ? ಅಥವಾ ತಿರಸ್ಕರಿಸುತ್ತಿರಾ? ಅಥವ ಇದರ ಬಗ್ಗೆ ಏನು ಪ್ರತಿಪಾದಿಸುತ್ತಿರಾ? ಸಮಾಲೋಚನೆಯೊಂದಿಗೆ ಚರ್ಚಿಸುವುದು.

೧೦. ನೀವು ನಮಾಜು ಎಷ್ಟು ಸಲ ಮಾಡುತ್ತೀರಿ?

೧೧. ನಿಮ್ಮ ಮಕ್ಕಳು ನಮೋಜು ಮಾಡಲು ಆಸಕ್ತಿ ತೋರಿಸುತ್ತಾರೆಯೇ?

೧೨. ನಿಮ್ಮ ಮಕ್ಕಳಿಗೆ ನಮೋಜು ಮಾಡಲು ಎಲ್ಲ ನಿಯಮಗಳು ನೀವು ನಿಮ್ಮ ಮನೆಯಲ್ಲಿ ಹೇಳಿಕೊಟ್ಟಿದ್ದಿರಾ?

೧೩. ಯಾವ ರೀತಿಯಾಗಿ ನಮೋಜು ಮಾಡಲು ಹೇಳಿಕೊಟ್ಟಿದ್ದಿರಾ?

೧೪. ನೀವು ಈಗ ಯಾವ ಕೆಲಸದದಲ್ಲಿ ಹೆಚ್ಚಾಗಿ ಭಾಗವಹಿಸುತ್ತಿರಾ?

೧೫. ನೀವು ನಿಮ್ಮ ಕಸುಬುಗಳಲ್ಲಿ ಈಗ ಯಾವ ಕಸುಬು ಹೆಚ್ಚಾಗಿ ಮಾಡುತ್ತಿರಾ?

೧೬. ಮುಸ್ಲಿಂ ಧರ್ಮದ ಯಾವ-ಯಾವ ನಿಯಮಗಳು ನಿಮಗೆ ತಿಳಿದಿವೆ?

೧೭. ಇಸ್ಲಾಂ ಧರ್ಮದ ನಿಯಮಗಳು ನೀವು ಒಪ್ಪುತ್ತಿರಾ?

೧೮. ಹಾಗಾದರೇ ಯಾವ ನಿಯಮಗಳು ಒಪ್ಪುತ್ತೀರಿ? ಸ್ಪಷ್ಟಪಡಿಸಿ

೧೯. ಇಸ್ಲಾಂ ಧರ್ಮದ ನಿಯಮಗಳು ನೀವು ಒಪ್ಪಲು ಸಿದ್ಧರಿದ್ದಿರಾ? ಯಾವ ಯಾವ ನಿಯಮಗಳು ಒಪ್ಪುತ್ತೀರಾ?

೨೦. ಇಸ್ಲಾಂ ಧರ್ಮದ ನಿಯಮಗಳು ಒಪ್ಪದೇ ನೀವು ತಿರಸ್ಕರಿಸುತ್ತಿರಾ?

೨೧. ಹಾಗಾದರೆ ಯಾಕೆ ತಿರಸ್ಕರಿಸುತ್ತಿರಿ? ತಿಳಿಸಿ.

೨೨. ನಿಮ್ಮ ಮಕ್ಕಳಿಗೆ ನಮಾಜು ಮಾಡಲು ನೀವು ಪ್ರೋತ್ಸಾಹಿಸುತ್ತೀರಾ?

೨೩. ಸರಕಾರದಿಂದ ನೀವು ಯಾವ ಯಾವ ಯೋಜನೆಗಳು ಪಡೆದುಕೊಂಡಿದ್ದಿರಾ?

೨೪. ನೀವು ವಕ್ಫಮಂಡಳಿಯಿಂದ ಯಾವುದಾದರೂ ಸೌಲಭ್ಯಗಳನ್ನು ಪಡೆದುಕೊಂಡಿದ್ದಿರಾ?

೨೫. ವಕ್ಫಮಂಡಳಿಯಿಂದ ನಿಮಗೆ ಯಾವುದಾದರು ಸೌಲಭ್ಯಗಳನ್ನು ಕೊಡಲು ಮುಂದಾಗುತ್ತಿದ್ದಾರೆ? ಅಥವಾ ಇಲ್ಲ.

೨೬. ಹೌದಾದರೆ ಯಾವ ಯಾವ ಸೌಲಭ್ಯಗಳು ನಿಮಗೆ ಕೊಟ್ಟಿದ್ದಾರೆ?

೨೭. ವಕ್ಫಮಂಡಳಿ ಬಗ್ಗೆ ನೀವು ಏನನ್ನು ಹೇಳಲು ಅಪೇಕ್ಷೆ ಪಡುತ್ತಿರಾ?

೨೮. ಇಸ್ಲಾಂ ಧರ್ಮದವರು ನಿಮ್ಮನ್ನು ಕೀಳಾಗಿ ಕಾಣುತ್ತಾರೆಯೇ ಅಥವಾ ಸಮನಾಗಿ ಕಾಣುತ್ತಾರೆ?

೨೯. ಇಸ್ಲಾಂ ಧರ್ಮದವರು ನಿಮ್ಮನ್ನು ಕೀಳಾಗಿ ಕಾಣುತ್ತಿದ್ದರೆ ಯಾವ ಯಾವ ವಿಷಯದಲ್ಲಿ ಕೀಳಾಗಿ ಕಾಣುತ್ತಾರೆ ತಿಳಿಸಿ? (ವಿವರವಾಗಿ)

೩೦. ಇಸ್ಲಾಂ ಧರ್ಮದವರು ನಿಮ್ಮನ್ನು ಸಮನಾಗಿ ಕಾಣುತ್ತಿದ್ದರೆ ಯಾವ ಯಾವ ವಿಷಯದಲ್ಲಿ ಸಮನಾಗಿ ಕಾಣುತ್ತಾರೆ ತಿಳಿಸಿ? (ವಿವರವಾಗಿ)

೩೧. ನೀವು ಪಿಂಜಾರರ ಸಮುದಾಯದಿಂದ ಬದಲಾವಣೆಯಾಗಲು ಇಷ್ಟಪಡುತ್ತಿರಾ?

೩೨. ಬದಲಾವಣೆಯಾಗಲು ಇಷ್ಟಪಟ್ಟರೆ ಯಾವ ಯಾವ ರೀತಿಯಲ್ಲಿ ಬದಲಾವಣೆಯಾಗಲು ಇಷ್ಟಪಡುತ್ತಿರಾ? ತಿಳಿಸಿ?

೩೩. ಇಸ್ಲಾಂ ಧರ್ಮದವರು ನಿಮ್ಮ ಬದಲಾವಣೆಗೆ ಪ್ರೋತ್ಸಾಹಿಸುತ್ತಾರೆಯೆ?

೩೪. ಇಸ್ಲಾಂ ಧರ್ಮವನ್ನು ಅಪ್ಪಿಕೊಳ್ಳಲು ನೀವೇ ಸ್ವಂತ ಮುಂದಾಗುತ್ತಿರಾ? ಅಥವಾ ಇಲ್ಲ? ತಿಳಿಸಿ.

೩೫. ಹೌದಾದರೆ ಯಾವ ವಿಧಾನಗಳಲ್ಲಿ ಅಪ್ಪಿಕೊಳ್ಳಲು ಸಿದ್ಧರಿದ್ದಿರಾ?



ಪಿಂಜಾರ ಸಮುದಾಯದ ಮಹಿಳೆ ಅಂಗನವಾಡಿ ಕಾರ್ಯಕರ್ತೆಯಾಗಿ



ಬಡಿಗಿತನದಲ್ಲಿ ನಿರತನಾಗಿರುವುದು



ಬಟ್ಟೆ ಹೊಲಿಯುವದರಲ್ಲಿ ನಿರತನಾಗಿರುವುದು



ಕೃಷಿಯಲ್ಲಿ ತೊಡಗಿರುವ ಮಹಿಳೆ




ಗೃಹಬಳಕೆಯ ವಸ್ತುಗಳ ಮಾರಾಟದಲ್ಲಿ ನಿರತನಾಗಿರುವುದು



ಆಯುರ್ವೇದಕ ಔಷದಿ ಅಂಗಡಿಯಲ್ಲಿ ತೊಡಗಿರುವುದು



ಕಂಪ್ಯೂಟರ್ ಕೇಂದ್ರದಲ್ಲಿ ಕಾರ್ಯನಿರ್ವಹಿಸುತ್ತಿರುವುದು



ಹಾಲು ಮಾರಾಟ ಅಂಗಡಿಯಲ್ಲಿ ತೊಡಗಿರುವುದು



ಸ್ತ್ರೀ ಶಕ್ತಿ ಸಂಘದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಹಿಳೆಯರು


ಪಿಂಜಾರ ಸಮುದಾಯದ ಹಿರಿಯರೊಂದಿಗೆ ಸಂದರ್ಶನದಲ್ಲಿ ತೊಡಗಿರುವ ಸಂಶೋಧನಾ ವಿದ್ಯಾರ್ಥಿ


ಪಿಂಜಾರ ಸಮುದಾಯದ ಹಿರಿಯ ನಾಗರಿಕ


ಬಾಳೆಹಣ್ಣಿನ ವ್ಯಾಪಾರದಲ್ಲಿ ತೊಡಗಿರುವುದು



ಪಾದರಕ್ಷೆ ಮಾರಾಟದಲ್ಲಿ ನಿರತನಾಗಿರುವುದು



ಹಿಟ್ಟಿನಗಿರಣಿ ನಡೆಸುತ್ತಿರುವುದು



ಶಾಲೆಗೆ ತೆರಳುತ್ತಿರುವ ಮಕ್ಕಳು



ಟೀ ಮಾರಾಟದಲ್ಲಿ ನಿರತವಾಗಿರುವ ಮಹಿಳೆ



ಪಿಂಜಾರ ಸಮುದಾಯದ ಗೋರಿ




ಪಿಂಜಾರ ಸಮುದಾಯದ ದರ್ಗ



ಪಿಂಜಾರ ಸಮುದಾಯಕ್ಕೆ ಸೇರಿದ ಮನೆ



ಮೇವು ಸಾಗಾಣಿಕೆಯಲ್ಲಿ ತೊಡಗಿರುವುದು



ಹೂ ಮಾರಾಟದಲ್ಲಿ ತೊಡಗಿರುವುದು



ಪಿಂಜಾರ ಸಮುದಾಯದ ಪ್ರಾರ್ಥನಾ ಮಂದಿರ



ಪಿಂಜಾರ ಸಮುದಾಯದ ಹಿರಿಯರೊಂದಿಗೆ ಸಂದರ್ಶನದಲ್ಲಿ ತೊಡಗಿರುವ
ಸಂಶೋಧನಾ ವಿದ್ಯಾರ್ಥಿ ಮಹಿಬೂಬು ಅಲಿ



ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ
ಇಲಾಖೆಯಲ್ಲಿ ಮೇಲ್ವಚಾರಕರಾಗಿ
ಕಾರ್ಯನಿರ್ವಹಿಸುತ್ತಿರುವುದು

# ಭಾರತ – ರಾಜಕೀಯ




Scale : 1 : 15 000 000 Approx


ರಾಯಚೂರು ಜಿಲ್ಲೆ
ಗುಲ್ಬರ್ಗ ಜಿಲ್ಲೆ
ಬಿಜಾಪುರ ಜಿಲ್ಲೆ
ಬಾಗಲಕೋಟೆ ಜಿಲ್ಲೆ
ಕೊಪ್ಪಳ ಜಿಲ್ಲೆ
ಬಳ್ಳಾರಿ ಜಿಲ್ಲೆ
ಆಂಧ್ರ
ಕೃಷ್ಣಾ ನದಿ
ತುಂಗಭದ್ರಾ ನದಿ
ಕೊಪ್ಪಾರ
ದೇವದುರ್ಗ
ಜಾಲಿಹಳ್ಳಿ
ಮಸರಕಲ್
ಗುರಗುಂಟಾ
ಗಲಗ
ಗಬ್ಬೂರು
ಅರಕೇರಾ
ರಾಮದುರ್ಗ
ಲಿಂಗಸೂಗೂರು
ಹಟ್ಟಿ
ಕ್ಯಾದಿಗೆಹ
ಸಿರವಾರ
ಆನೆಹೊಸೂರು
ಕವತಾಳ
ಸಂತೆಕಲ್ಲೂರು
ಬಾಗಲವಾಡ
ಮುದ್ಗಲ್
ಜಂಗಮರಹಳ್ಳಿ
ಮಸ್ಕಿ
ಮಾನ್ವಿ
ಕುರುಡಿ
ಮಡಕಿಹಾಳು
ಬಳಗಾನೂರು
ಹಿರೇ ಕೊಟ್ನಕಲ್
ಆರೋಲಿ
ನಾಗನಕಲ್ಲು
ಗುಂಜಹಳ್ಳಿ
ತುರುವಿನಹಾಳ
ಸಿಂಧನೂರು
ಗುರೇಬಾಳ
ಜಾಲಿಹಳ್ಳಿ
ಬಾದ್ರಲಿ
ಹೆಡಗಿನಾಳ
ಸಾಲಗುಂದ
ಹುಡಾ
ದೇವಸೂಗೂರು
ಯರಮರಸ
ಚಂದ್ರಬಂಡಾ
ಕಲ್ಮಲಾ
ರಾಯಚೂರು
ಕಲ್ಲೂರು
ಮಲಿಯಾಬಾದ್
ಯರಗೇರಾ
ಮಟಮಾರಿ
ಗಿಲ್ಲೆಸೂಗೂರು
ಇಡಪನೂರು
ನದಿಗಳು
ಕೃಷ್ಣಾನದಿ
ತುಂಗಭದ್ರಾ
ತಾಲ್ಲೂಕುಗಳು
ರಾಯಚೂರು
ದೇವದುರ್ಗ
ಲಿಂಗಸೂಗೂರು
ಮಾನ್ವಿ
ಸಿಂಧನೂರು
Scale : 1: 1 440 000 Approx.

